RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ-III | ಬೆಂಗಳೂರು, ಮಂಗಳವಾರ, ಅಕ್ಟೋಬರ್ ೪, ೨೦೧೬ (ಆಶ್ವಯುಜ ೧೨, ಶಕ ವರ್ಷ ೧೯೩೮) | ನಂ. ೧೧೫೨ |
|---|---|---|
| Part-III | Bengaluru, Tuesday, October 4, 2016 (Aashwayuja 12, Shaka Varsha 1938) | No. 1152 |


**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

ಕೆ.ಎಸ್.ಸಿ.ಎಂ.ಎಫ್ ಬಿಲ್ಡಿಂಗ್(ಹಿಂಭಾಗ), ನಂ.8, 1ನೇ ಮಹಡಿ ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು-52.

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ರಾಚುಆ:58:ಇಜಿಪಿ.2015, ದಿನಾಂಕ: 03-10-2016**

ರಾಜ್ಯ ಚುನಾವಣಾ ಆಯೋಗವು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 5 ಉಪಪ್ರಕರಣ(1)ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಅಧಿಸೂಚನೆ ಸಂಖ್ಯೆ: ರಾಚುಆ:58: ಇಜಿಪಿ:2015 ದಿನಾಂಕ:01.04.2015ರಂದು ಬೆಳಗಾವಿ ಜಿಲ್ಲೆಯ ಗ್ರಾಮ ಪಂಚಾಯಿತಿಗಳಿಗೆ 2011ರ ಜನಗಣತಿಯ ಜನಸಂಖ್ಯೆಯಂತೆ ಸದಸ್ಯ ಸಂಖ್ಯೆಯನ್ನು ನಿರ್ದಿಷ್ಟಪಡಿಸಿ ಅಧಿಸೂಚಿಸಿದೆ.

ರಾಯಭಾಗ್ ತಾಲ್ಲೂಕು ಸಿದ್ದಾಪುರ ಗ್ರಾಮ ಪಂಚಾಯಿತಿಗೆ 2015ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಸಿದ್ದಾಪುರ ಗ್ರಾಮದ 8 ಸ್ಥಾನಗಳಿಗೆ ಆಯ್ಕೆಯಾಗಿದ್ದು, ಯಲ್ಪಾರಟ್ಟಿ ಗ್ರಾಮಸ್ಥರು ಚುನಾವಣೆ ಬಹಿಷ್ಕಾರ ಮಾಡಿದ್ದರಿಂದ ಸದರಿ ಗ್ರಾಮದ ಸ್ಥಾನಗಳಿಗೆ ಆಯ್ಕೆಯಾಗಿರುವುದಿಲ್ಲ.

ಸರ್ಕಾರದ ಅದೇಶ ಸಂಖ್ಯೆ:ಗ್ರಾಅಪ:185: ಗ್ರಾಪಂನ್ಯಾ:2015 ದಿ.01-07-2016ರಲ್ಲಿ ಸಿದ್ದಾಪುರ ಗ್ರಾಮ ಪಂಚಾಯಿತಿಯಿಂದ ಯಲ್ಪಾರಟ್ಟಿ ಗ್ರಾಮವನ್ನು ಪ್ರತ್ಯೇಕಿಸಿ, ಯಲ್ಪಾರಟ್ಟಿ ಗ್ರಾಮ ಪಂಚಾಯಿತಿಯನ್ನು ಹೊಸದಾಗಿ ರಚಿಸಲು ಅದೇಶಿದೆ. ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಪ್ರಕರಣ 4ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಸಿದ್ದಾಪುರ ಗ್ರಾಮ ಮತ್ತು ಯಲ್ಪಾರಟ್ಟಿ ಗ್ರಾಮಗಳನ್ನು ಪ್ರತ್ಯೇಕ ಗ್ರಾಮ ಪಂಚಾಯಿತಿಗಳನ್ನಾಗಿ ಘೋಷಿಸಿ, ಸಂಖ್ಯೆ:ಚುಶಾ:ಇಎಲ್‌ಎನ್: ವಿವ-95/2015-16 ದಿ.23-07-2016ರಂದು ಅಧಿಸೂಚನೆ ಹೊರಡಿಸಿರುತ್ತಾರೆ.

ರಾಯಭಾಗ್ ತಾಲ್ಲೂಕು ದಿಗ್ಗೇವಾಡಿ ಗ್ರಾಮ ಪಂಚಾಯಿತಿಗೆ 2015ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ದಿಗ್ಗೇವಾಡಿ ಗ್ರಾಮದ 13 ಸ್ಥಾನಗಳಿಗೆ ಆಯ್ಕೆಯಾಗಿದ್ದು, ಯಡ್ರಾಂವ ಗ್ರಾಮಸ್ಥರು ಚುನಾವಣೆ ಬಹಿಷ್ಕಾರ ಮಾಡಿದ್ದರಿಂದ ಸದರಿ ಗ್ರಾಮದ ಸ್ಥಾನಗಳಿಗೆ ಆಯ್ಕೆಯಾಗಿರುವುದಿಲ್ಲ.

ಸರ್ಕಾರದ ಅದೇಶ ಸಂಖ್ಯೆ:ಗ್ರಾಅಪ:724: ಗ್ರಾಪಂಅ:2015 ದಿ.20-10-2015ರಲ್ಲಿ ದಿಗ್ಗೇವಾಡಿ ಗ್ರಾಮ ಪಂಚಾಯಿತಿಯಿಂದ ಯಡ್ರಾಂವಗ್ರಾಮವನ್ನು ಪ್ರತ್ಯೇಕಿಸಿ, ಯಡ್ರಾಂವ ಗ್ರಾಮ ಪಂಚಾಯಿತಿಯನ್ನು ಹೊಸದಾಗಿ ರಚಿಸಲು ಅದೇಶಿದೆ. ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಇವರು ಪ್ರಕರಣ 4ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ದಿಗ್ಗೇವಾಡಿ ಗ್ರಾಮ ಮತ್ತು ಯಡ್ರಾಂವ ಗ್ರಾಮಗಳನ್ನು ಪ್ರತ್ಯೇಕ ಗ್ರಾಮ ಪಂಚಾಯಿತಿಗಳನ್ನಾಗಿ ಘೋಷಿಸಿ, ಸಂಖ್ಯೆ:ಸುಶಾ:ಇಎಲ್‌ಎನ್: ವಿವ-86/2015-16 ದಿ.16-11-2015ರಂದು ಅಧಿಸೂಚನೆ ಹೊರಡಿಸಿರುತ್ತಾರೆ.

ರಾಮದುರ್ಗ ತಾಲ್ಲೂಕಿನ ತುರನೂರ ಗ್ರಾಮ ಪಂಚಾಯಿತಿಯ ಕೆಲವು ಪ್ರದೇಶಗಳು ರಾಮದುರ್ಗ ಪುರಸಭೆಗೆ ಸೇರ್ಪಡೆಯಾಗಿದ್ದರಿಂದ ಸರ್ಕಾರದ ಪತ್ರ ಸಂಖ್ಯೆ:ಗ್ರಾಅಪ:510:ಗ್ರಾಪಂಅ:2016 ದಿ.14-06-2016ರಲ್ಲಿ ತುರನೂರ ಮತ್ತು ರಂಕಲಕೊಪ್ಪ ಗ್ರಾಮಗಳನ್ನೊಳಗೊಂಡ ತುರನೂರ ಗ್ರಾಮ ಪಂಚಾಯಿತಿಯು ಮುಂದುವರೆಯುತ್ತದೆಂದು ಹಾಗೂ ಹಲಗತ್ತಿ ಗ್ರಾಮ ಪಂಚಾಯಿತಿಯ ಕೆಲವು ಪ್ರದೇಶಗಳು ರಾಮದುರ್ಗ ಪುರಸಭೆಗೆ ಸೇರ್ಪಡೆಯಾಗಿದ್ದು ಹಲಗತ್ತಿ ಗ್ರಾಮವು ಉಳಿದುಕೊಳ್ಳುವುದರಿಂದ ಸರ್ಕಾರದ ಪತ್ರ ಸಂಖ್ಯೆ:ಗ್ರಾಅಪ:615:ಗ್ರಾಪಂಅ:2015 ದಿ.21-12-2015ರಲ್ಲಿ ಹಲಗತ್ತಿ ಗ್ರಾಮ

ಪಂಚಾಯಿತಿಯು ಮುಂದುವರೆದಿರುವುದಾಗಿ ನೀಡಿದ ನಿರ್ದೇಶನಗಳಂತೆ ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆರವರು ಪ್ರಕರಣ 4ರಡಿಯಲ್ಲಿ ತುರನೂರು ಮತ್ತು ರಂಕಲಕೊಪ್ಪ ಗ್ರಾಮಗಳನ್ನೊಳಗೊಂಡ ತುರನೂರು ಗ್ರಾಮಪಂಚಾಯಿತಿಯನ್ನು ನಂ.ಚುಶಾ:ಇಎಲ್ಎನ್:ವಿವ–1/2016–17 ದಿ.29–06–2016ರಲ್ಲಿಯೂ, ಹಾಗೂ ಹಲಗತ್ತಿ ಗ್ರಾಮ ಪಂಚಾಯಿತಿಯನ್ನು ಪುನರ್ ರಚಿಸಿ ನಂ.ಚುಶಾ:ಇಎಲ್ಎನ್:ವಿವ–131/2015–16 ದಿ.12–04–2016ರಲ್ಲಿ ಅಧಿಸೂಚನೆ ಹೊರಡಿಸಿರುತ್ತಾರೆ.

ರಾಮದುರ್ಗ ತಾಲ್ಲೂಕು, ಮುದೇನೂರ ಗ್ರಾಮ ಪಂಚಾಯಿತಿಗೆ ಸಾರ್ವತ್ರಿಕ ಚುನಾವಣೆ ನಡೆದಿದ್ದು ಆ ನಂತರ ಸರ್ಕಾರದ ಪತ್ರ ಸಂಖ್ಯೆ:ಗ್ರಾಅಪ:73ಗ್ರಾಪಂಅ:2015 ದಿ.10.08.2015ರ ಪತ್ರದಂತೆ ಜಿಲ್ಲಾದಿಕಾರಿಗಳು ಅಧಿಸೂಚನೆ ಸಂಖ್ಯೆ:ಚುಶಾ:ಇಎಲ್ಎನ್:ವಿವ–80/2015–16 ದಿ.15.09.2015ರಲ್ಲಿ ಮುದೇನೂರು ಗ್ರಾಮ ಪಂಚಾಯಿತಿಯನ್ನು ವಿಭಜಿಸಿ ಮುದೇನೂರ ಮತ್ತು ಓಬಳಾಪುರ ಗ್ರಾಮ ಪಂಚಾಯಿತಿಗಳನ್ನು ರಚಿಸಿ ಅಧಿಸೂಚನೆ ಹೊರಡಿಸಿರುತ್ತಾರೆ.

ಸರ್ಕಾರದ ಪತ್ರ ಸಂಖ್ಯೆ: ಗ್ರಾಅಪ: 718/ಗ್ರಾಪಂಅ/2015 ದಿ.21.09.2015ರ ನಿರ್ದೇಶನದಂತೆ, ಗ್ರಾಮ ಪಂಚಾಯಿತಿಗಳಲ್ಲಿ ಆಯ್ಕೆಯಾಗಿರುವ ಸದಸ್ಯರು ವಿಭಜಿತ ಗ್ರಾಮಪಂಚಾಯಿತಿಯಲ್ಲಿ ಮುಂದುವರೆಯುವವರು ಹಾಗೂ ಪ್ರತ್ಯೇಕಗೊಂಡ ಗ್ರಾಮಗಳ ಸದಸ್ಯರ ಸಂಖ್ಯೆಯು ಸೀಮಿತಗೊಳ್ಳುವುದು.

ಮುದೇನೂರು ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಿಂದ ಆಯ್ಕೆಯಾಗಿರುವ ಸದಸ್ಯರು ಮತ್ತು ಓಬಳಾಪುರ ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಆಯ್ಕೆಯಾಗಿರುವ ಸದಸ್ಯರು ಆಯಾ ಗ್ರಾಮ ಪಂಚಾಯಿತಿಯಲ್ಲಿ ಮುಂದುವರೆಯುತ್ತಾರೆ. ಆದುದರಿಂದ ಗ್ರಾಮಗಳ ವಿಭಜನೆಯಂತೆ ನಿಗದಿಪಡಿಸಿರುವ ಸ್ಥಾನಗಳು ಆಯಾ ಪಂಚಾಯಿತಿಯಲ್ಲಿ ಮುಂದುವರೆಯುತ್ತದೆ. ಅದರಂತೆ ಈ ಎರಡು ಗ್ರಾಮ ಪಂಚಾಯಿತಿಗಳಿಗೆ ಒಟ್ಟು ಸದಸ್ಯರ ಸಂಖ್ಯೆಯು ವರ್ಗಾವಣೆಯಂತೆ ಸೀಮಿತಗೊಳ್ಳುತ್ತದೆ.

ಆದುದರಿಂದ, ರಾಜ್ಯ ಚುನಾವಣಾ ಆಯೋಗವು ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 5 ಉಪಪ್ರಕರಣ(1)ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ರಾಯಭಾಗ್ ತಾಲ್ಲೂಕಿನ ಸಿದ್ದಾಪುರ, ದಿಗ್ಗೇವಾಡಿ ಮತ್ತು ರಾಮದುರ್ಗ ತಾಲ್ಲೂಕಿನ ತುರನೂರ, ಹಲಗತ್ತಿ, ಮುದೇನೂರು ಮತ್ತು ಓಬಳಾಪುರ ಗ್ರಾಮ ಪಂಚಾಯಿತಿಗಳಿಗೆ ಸದಸ್ಯ ಸ್ಥಾನಗಳನ್ನು ಈ ಕೆಳಕಂಡಂತೆ ಮರು ನಿಗದಿಪಡಿಸಿದೆ.

ನೂತನ ಗ್ರಾಮ ಪಂಚಾಯಿತಿಗಳಾಗಿದ್ದು, ಸದಸ್ಯರ ಆಯ್ಕೆಯಾಗದೇ ಇರುವುದರಿಂದ, ರಾಯಭಾಗ್ ತಾಲ್ಲೂಕಿನ ಯಲ್ಪಾರಟ್ಟಿ ಮತ್ತು ಯಡ್ರಾಂವ ಗ್ರಾಮ ಪಂಚಾಯಿತಿಗಳಿಗೆ ಹಾಗೂ ಪುನರ್ ರಚಿತವಾಗಿದ್ದು ಸದಸ್ಯರ ಆಯ್ಕೆಯಾಗದೆ ಇರುವ ತುರನೂರ ಮತ್ತು ಹಲಗತ್ತಿ ಗ್ರಾಮ ಪಂಚಾಯಿತಿಗಳಿಗೆ 2011ರ ಜನಗಣತಿ ಜನಸಂಖ್ಯೆಯಂತೆ ಹಾಗೂ ಪ್ರಕರಣ 5(1)ರಂತೆ ಸದಸ್ಯರ ಸಂಖ್ಯೆಯನ್ನು ನಿರ್ಧಿಷ್ಟಪಡಿಸಿ ಈ ಕೆಳಕಂಡ ಕೋಷ್ಟಕದಲ್ಲಿ ಅಧಿಸೂಚಿಸಿದೆ.

**ಕೋಷ್ಟಕ**

| **ತಾಲ್ಲೂಕು: ರಾಯಭಾಗ್** | | | |
|---|---|---|---|
| **ಕ್ರ.ಸಂ.** | **ಗ್ರಾಮ ಪಂಚಾಯಿತಿ ಹೆಸರು** | **ಸದಸ್ಯರ ಸಂಖ್ಯೆ** | **ಷರಾ** |
| 1 | ಸಿದ್ದಾಪುರ | 8 | ಮರುನಿಗದಿಪಡಿಸಿದೆ |
| 2 | ಯಲ್ಪಾರಟ್ಟಿ | 10 | ನೂತನ ಗ್ರಾಮಪಂಚಾಯಿತಿ |
| 3 | ದಿಗ್ಗೇವಾಡಿ | 13 | ಮರುನಿಗದಿಪಡಿಸಿದೆ |
| 4 | ಯಡ್ರಾಂವ | 8 | ನೂತನ ಗ್ರಾಮಪಂಚಾಯಿತಿ |
| | **ತಾಲ್ಲೂಕು: ರಾಮದುರ್ಗ** | | |
| 1 | ತುರನೂರ | 10 | ಮರುನಿಗದಿಪಡಿಸಿದೆ |
| 2 | ಹಲಗತ್ತಿ | 11 | ಮರುನಿಗದಿಪಡಿಸಿದೆ |
| 3 | ಮುದೇನೂರು | 11 | ಮರುನಿಗದಿಪಡಿಸಿದೆ |
| 4 | ಓಬಳಾಪುರ | 12 | ಮರುನಿಗದಿಪಡಿಸಿದೆ |

ಆದೇಶಾನುಸಾರ

**ಆರ್.ಚಂದ್ರಶೇಖರ್**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ-III | ಬೆಂಗಳೂರು, ಗುರುವಾರ, ಅಕ್ಟೋಬರ್ ೧೩, ೨೦೧೬ (ಆಶ್ವಯುಜ ೨೧, ಶಕ ವರ್ಷ ೧೯೩೮) | ನಂ. ೧೧೬೧ |
|---|---|---|
| ***Part–III*** | ***Bengaluru, Thursday, October 13, 2016 (Aashwayuja 21, Shaka Varsha 1938)*** | ***No. 1161*** |


**ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ ಮತ್ತು ಕಾನೂನು ಮಾಪನಶಾಸ್ತ್ರ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಆನಾಸ:13:ಡಿಆರ್‌ಎ:2016, ಬೆಂಗಳೂರು, ದಿನಾಂಕ: 06.10.2016**

**ವಿಷಯ:** ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ವಿತರಿಸಲಾಗುತ್ತಿರುವ ಸಕ್ಕರೆ, ತಾಳೆಎಣ್ಣೆ ಮತ್ತು ಅಯೋಡಿನ್‌ಯುಕ್ತ ಉಪ್ಪು ಹಾಗೂ ಎಪಿಎಲ್ ಅಕ್ಕಿ/ಗೋಧಿ ಚಿಲ್ಲರೆ ವಿತರಕರ ಲಾಭಾಂಶವನ್ನು ಪರಿಷ್ಕರಿಸುವ ಬಗ್ಗೆ;

ಸರ್ಕಾರ ಆದೇಶ ಸಂಖ್ಯೆ:ಆನಾಸ 13 ಡಿಆರ್‌ಎ 2016, ದಿನಾಂಕ 23.09.2016ರ ಆದೇಶದ, ಆದೇಶ ಭಾಗದಲ್ಲಿ

**"ಈ ಆದೇಶವು ಅಕ್ಟೋಬರ್–2016ರ ಮಾಹೆಯಿಂದ ಜಾರಿಗೆ ಬರತಕ್ಕದ್ದು" ಎಂಬುದರ ಬದಲಾಗಿ "ಈ ಆದೇಶವು ನವೆಂಬರ್–2016ರಿಂದ ಜಾರಿಗೆ ಬರತಕ್ಕದ್ದು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.**

ಇನ್ನುಳಿದಂತೆ ದಿನಾಂಕ 23.09.2016ರ ಆದೇಶದಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು ೨೦೦

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–*III* | ಬೆಂಗಳೂರು, ಗುರುವಾರ, ಅಕ್ಟೋಬರ್ ೧೩, ೨೦೧೬ (ಆಶ್ವಯುಜ ೨೧, ಶಕ ವರ್ಷ ೧೯೩೮) | ನಂ. ೧೧೬೪ |
|---|---|---|
| ***Part–III*** | ***Bengaluru, Thursday, October 13, 2016 (Aashwayuja 21, Shaka Varsha 1938)*** | ***No. 1164*** |


**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 117 ಎಂಎಲ್ಆರ್ 2016, ಬೆಂಗಳೂರು, ದಿನಾಂಕ:13–10–2016.**

ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣೆ) ನಿಯಮಾವಳಿಗಳು 1979ರ 68ನೇ ನಿಯಮದೊಂದಿಗೆ ಓದಲಾದ 1976ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ನಿಯಮಗಳ ಅಧಿನಿಯಮ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ:14)ರ 32ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ದಿನಾಂಕ:28–09–2016 ರಂದು ನಡೆದ 17ನೇ ಅವಧಿಯ ಮೇಯರ್ ಹಾಗೂ ಉಪಮೇಯರ್ ಚುನಾವಣೆಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಮೇಯರ್ ಹಾಗೂ ಉಪ ಮೇಯರ್ ಆಗಿ ಈ ಕೆಳಕಂಡ ಅಭ್ಯರ್ಥಿಗಳು ಆಯ್ಕೆಯಾಗಿದ್ದು, ಸದರಿ ಅಭ್ಯರ್ಥಿಗಳ ಹೆಸರನ್ನು ಈ ಮೂಲಕ ಸಾರ್ವಜನಿಕ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| *ಕ್ರ ಸಂ* | ***ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ*** |
|---|---|
| | **ಮಹಾಪೌರರ ಸ್ಥಾನಕ್ಕೆ** |
| 1 | ಶ್ರೀಮತಿ ಜಿ. ಪದ್ಮಾವತಿ<br>ನಂ. 2/1, 2ನೇ ಅಡ್ಡರಸ್ತೆ, 6ನೇ ವಿಭಾಗ, ರಾಜಾಜಿನಗರ, ಬೆಂಗಳೂರು–10. |
| | **ಉಪ ಮಹಾಪೌರರ ಸ್ಥಾನಕ್ಕೆ** |
| 2 | ಶ್ರೀ ಎಮ್. ಆನಂದ್,<br>ನಂ. 9, ಮಾರುತಿ ನಿಲಯ, 1ನೇ ಅಡ್ಡರಸ್ತೆ,<br>3ನೇ ಮುಖ್ಯರಸ್ತೆ, ಎ.ಇ.ಸಿ.ಎಸ್. ಬಡಾವಣೆ, ನಾಗೇಶೆಟ್ಟಿಹಳ್ಳಿ, ಬೆಂಗಳೂರು–94 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 50

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–III<br>Part–III | ಬೆಂಗಳೂರು, ಗುರುವಾರ, ಅಕ್ಟೋಬರ್ ೨೦, ೨೦೧೬ (ಆಶ್ವಯುಜ ೨೮, ಶಕ ವರ್ಷ ೧೯೩೮)<br>Bengaluru, Thursday, October 20, 2016 (Aashwayuja 28, Shaka Varsha 1938) | ನಂ. ೧೧೮೪<br>No. 1184 |
|---|---|---|

ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

ಅಧಿಸೂಚನೆ

ನಂ. ಇಎಲ್‌ಎನ್ (2) ಸಿಆರ್17/2016–17, ದಿನಾಂಕ : 20/10/2016

ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು 1993 ರ 12ನೇ ನಿಯಮದ ಮೇರೆಗೆ ಹೊರಡಿಸಲಾದ ಈ ಕಛೇರಿಯ ಅಧಿಸೂಚನೆ ಸಂಖ್ಯೆ : ಇಎಲ್‌ಎನ್(2)ಸಿಆರ್ 17/2016–17 ದಿನಾಂಕ : 16–08–2016ರ ಪ್ರಕಾರ ಕೋಲಾರ ಜಿಲ್ಲೆಯಲ್ಲಿ ವಿವಿಧ ಕಾರಣಗಳಿಂದ ಭರ್ತಿಯಾಗದೆ ಖಾಲಿ ಉಳಿದಿರುವ ಸದಸ್ಯ ಸ್ಥಾನಗಳಿಗೆ ಚುನಾಯಿತ ಸದಸ್ಯರನ್ನು ತುಂಬಲು ಗ್ರಾಮ ಪಂಚಾಯ್ತಿಗಳ ಉಪ ಚುನಾವಣೆಯನ್ನು ನಡೆಸಲಾಗಿದ್ದು, ಸದರಿ ಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ಘೋಷಿಸಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 5ರ ಉಪ ಪ್ರಕರಣ 8 ರಲ್ಲಿ ಮತ್ತು ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆ ನಡೆಸುವ) ನಿಯಮಗಳು 1993ರ ನಿಯಮ 76ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕೋಲಾರ ಜಿಲ್ಲೆಯ ಜಿಲ್ಲಾಧಿಕಾರಿ ಡಾ.ಕೆ.ವಿ.ತ್ರಿಲೋಕ್‌ಚಂದ್ರ, ಭಾ.ಆ.ಸೇ., ಆದ ನಾನು ಗ್ರಾಮ ಪಂಚಾಯಿತಿಗಳಿಗೆ ಹೊಸದಾಗಿ ಆಯ್ಕೆಯಾದ ಸದಸ್ಯರುಗಳ ಹೆಸರುಗಳನ್ನು ಈ ಕೆಳಗೆ ನಮೂದಿಸಿರುವಂತೆ ಪ್ರಕಟಿಸಿರುತ್ತೇನೆ.

ತಾಲ್ಲೂಕು : ಶ್ರೀನಿವಾಸಪುರ

| ಕ್ರ. ಸಂ. | ಗ್ರಾಮ ಪಂಚಾಯಿತಿ ಕ್ರ.ಸಂ. ಮತ್ತು ಹೆಸರು | ಕ್ಷೇತ್ರದ ಕ್ರಮ ಸಂಖ್ಯೆ ಮತ್ತು ಹೆಸರು | ಕ್ಷೇತ್ರಕ್ಕೆ ನಿಗಧಿಪಡಿಸಿದ ಸ್ಥಾನಗಳು | ಮೀಸಲಾತಿ ಸ್ಥಾನ | ಆಯ್ಕೆಯಾದ ಸದಸ್ಯರ ಹೆಸರು ಮತ್ತು ವಿಳಾಸ (ಶ್ರೀ/ಶ್ರೀಮತಿ) |
|---|---|---|---|---|---|
| 1 | 2 | 3 | 4 | 5 | 6 |
| 1 | 10 ನೆಲವಂಕಿ | 6 ಕೊಪ್ಪವಾರಿಪಲ್ಲಿ | 1(ಒಂದು) | ಪರಿಶಿಷ್ಟ ಪಂಗಡ | ಶ್ರೀ ಕೃಷ್ಣಪ್ಪ ಬಿನ್ ಚೆನ್ನರಾಯಪ್ಪ, ಕೆ.ಗೊಲ್ಲಪಲ್ಲಿ ಗ್ರಾಮ, ಪಾತನೆಲವಂಕಿ ಅಂಚೆ, ಶ್ರೀನಿವಾಸಪುರ ತಾಲ್ಲೂಕು. |
| 2 | 21 ನಂಬಿಹಳ್ಳಿ | 3 ಸಿ.ಹೊಸೂರು | 1(ಒಂದು) | ಸಾಮಾನ್ಯ | ಶ್ರೀಮತಿ ಮಂಜುಳ ಕೋಂ ವೈಕುಂಠವಾಸರೆಡ್ಡಿ, ಸಿ.ಹೊಸೂರು ಗ್ರಾಮ, ನಂಬಿಹಳ್ಳಿ ಅಂಚೆ, ಶ್ರೀನಿವಾಸಪುರ ತಾಲ್ಲೂಕು. |

| ಕ್ರ. ಸಂ. | ಗ್ರಾಮ ಪಂಚಾಯಿತಿ ಕ್ರ.ಸಂ. ಮತ್ತು ಹೆಸರು | ಕ್ಷೇತ್ರದ ಕ್ರಮ ಸಂಖ್ಯೆ ಮತ್ತು ಹೆಸರು | ಕ್ಷೇತ್ರಕ್ಕೆ ನಿಗಧಿಪಡಿಸಿದ ಸ್ಥಾನಗಳು | ಮೀಸಲಾತಿ ಸ್ಥಾನ | ಆಯ್ಕೆಯಾದ ಸದಸ್ಯರ ಹೆಸರು ಮತ್ತು ವಿಳಾಸ (ಶ್ರೀ/ಶ್ರೀಮತಿ) |
|---|---|---|---|---|---|
| 1 | 2 | 3 | 4 | 5 | 6 |

ತಾಲ್ಲೂಕು : ಕೋಲಾರ

| | | | | | |
|---|---|---|---|---|---|
| 1 | 6. ಷಾಪೂರು | 5. ಸಿರೇಸಂದ್ರ | 1(ಒಂದು) | ಸಾಮಾನ್ಯ | ಶ್ರೀ ಎಸ್.ಎನ್.ಮನೋಹರ್ ಬಿನ್ ನಾರಾಯಣಪ್ಪ, ಸಿರೇಸಂದ್ರ ಗ್ರಾಮ, ಷಾಪೂರು ಅಂಚೆ, ಕೋಲಾರ ತಾಲ್ಲೂಕು. |

ತಾಲ್ಲೂಕು : ಮಾಲೂರು

| | | | | | |
|---|---|---|---|---|---|
| 1 | 20.ಹಸಾಂಡಹಳ್ಳಿ | 6.ವರದಾಪುರ | 1(ಒಂದು) | ಅನುಸೂಚಿತ ಜಾತಿ | ಶ್ರೀಮತಿ ಮಂಜಮ್ಮ ಕೋಂ ವೆಂಕಟೇಶಪ್ಪ, ವರದಾಪುರ ಗ್ರಾಮ, ಹಸಾಂಡಹಳ್ಳಿ ಅಂಚೆ, ಮಾಲೂರು ತಾಲ್ಲೂಕು. |
| 2 | 24.ಚಿಕ್ಕತಿರುಪತಿ | 8.ಜಗದೇನಹಳ್ಳಿ | 1(ಒಂದು) | ಸಾಮಾನ್ಯ | ಶ್ರೀಮತಿ ವೀಣಾ ಎಸ್ ಕೋಂ ಜೆ.ವಿ.ಮಂಜುನಾಥ, ಜಗದೇನಹಳ್ಳಿ ಗ್ರಾಮ, ಲಕ್ಕೂರು ಅಂಚೆ, ಮಾಲೂರು ತಾಲ್ಲೂಕು. |

ತಾಲ್ಲೂಕು : ಬಂಗಾರಪೇಟೆ

| | | | | | |
|---|---|---|---|---|---|
| 1 | 3–ಮಾವಹಳ್ಳಿ | 9–ಐತಾಂಡಹಳ್ಳಿ | 1(ಒಂದು) | ಪರಿಶಿಷ್ಟ ಜಾತಿ | ಶ್ರೀ ವಿ.ಚಲಪತಿ ಬಿನ್ ವೆಂಕಟರಾಮಪ್ಪ, ಐತಾಂಡಹಳ್ಳಿ ಗ್ರಾಮ, ಡಿ.ಕೆ.ಹಳ್ಳಿ ಅಂಚೆ, ಬಂಗಾರಪೇಟೆ. |
| 2 | 30–ಶ್ರೀನಿವಾಸಸಂದ್ರ | 6–ಪೀಲವಾರ | 1(ಒಂದು) | ಸಾಮಾನ್ಯ | ಶ್ರೀ ರಾಮರೆಡ್ಡಿ ಬಿನ್ ಗಂಟ್ಲರೆಡ್ಡಿ, ನಂದ್ಯಾಲಗಡ್ಡ ಗ್ರಾಮ, ಶ್ರೀನಿವಾಸಸಂದ್ರ ಅಂಚೆ, ಬಂಗಾರಪೇಟೆ. |

**ಡಾ.ಕೆ.ವಿ.ತ್ರಿಲೋಕ್‌ಚಂದ್ರ**
ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 100

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ-*III* | ಬೆಂಗಳೂರು, ಗುರುವಾರ, ಅಕ್ಟೋಬರ್ ೨೦, ೨೦೧೬ (ಆಶ್ವಯುಜ ೨೮, ಶಕ ವರ್ಷ ೧೯೩೮) | ನಂ. ೧೧೮೫ |
| *Part-III* | *Bengaluru, Thursday, October 20, 2016 (Aashwayuja 28, Shaka Varsha 1938)* | *No. 1185* |


**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಅಂಚೆ ಪೆಟ್ಟಿಗೆ ನಂ. 5074, ವಿಧಾನಸೌಧ, ಬೆಂಗಳೂರು-560 233.**

**ಸಂಖ್ಯೆ:ವಿಸಸ/ಶಾರಶಾ/723/ಸ.ರಾ/2016, ದಿನಾಂಕ:20.10.2016**

### ಅಧಿಸೂಚನೆ

ನಂಜನಗೂಡು (ಪ.ಜಾ.) ವಿಧಾನಸಭಾ ಕ್ಷೇತ್ರ ಸಂಖ್ಯೆ:214 ರಿಂದ ಹದಿನಾಲ್ಕನೇ ವಿಧಾನಸಭೆಗೆ ಚುನಾಯಿತರಾಗಿದ್ದ **ಶ್ರೀ ವಿ. ಶ್ರೀನಿವಾಸ ಪ್ರಸಾದ್**, ಅವರು ವಿಧಾನಸಭೆಯ ಸದಸ್ಯತ್ವ ಸ್ಥಾನಕ್ಕೆ ರಾಜೀನಾಮೆ ನೀಡಿದ್ದು, ಸದರಿ ರಾಜೀನಾಮೆಯನ್ನು ವಿಧಾನಸಭೆಯ ಮಾನ್ಯ ಸಭಾಧ್ಯಕ್ಷರು ದಿನಾಂಕ:20ನೇ ಅಕ್ಟೋಬರ್, 2016ರಂದು ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ. ಆದುದರಿಂದ ವಿಧಾನಸಭೆಯಲ್ಲಿ ಒಂದು ಸ್ಥಾನವು ತೆರವಾಗಿರುತ್ತದೆ.

**ಎಸ್. ಮೂರ್ತಿ**
ಕಾರ್ಯದರ್ಶಿ (I/c)
ಕರ್ನಾಟಕ ವಿಧಾನಸಭೆ

## KARNATAKA LEGISLATIVE ASSEMBLY SECRETARIAT

**P.B. No.5074, Vidhana Soudha, Bengaluru-560 233.**

**No. KLA/LGA/723/MR/2016, Dated: 20.10.2016**

### NOTIFICATION

Shri V. Srinivasa Prasad, Member, Legislative Assembly elected to the Fourteenth Assembly from Nanjanagudu (SC) Constituency, No.214 has tendered his resignation to the Membership of Legislative Assembly and the same has been accepted by the Hon'ble Speaker, Legislative Assembly on 20th October, 2016 (Forenoon) Hence, one seat in the Legislative Assembly has fallen vacant.

**S.MURTHY**
Secretary (I/c)
Karnataka Legislative Assembly

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 50

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ–III | ಬೆಂಗಳೂರು, ಶುಕ್ರವಾರ, ಅಕ್ಟೋಬರ್ ೨೧, ೨೦೧೬ (ಆಶ್ವಯುಜ ೨೯, ಶಕ ವರ್ಷ ೧೯೩೮) | ನಂ. ೧೧೯೧ |
|---|---|---|
| *Part–III* | *Bengaluru, Friday, October 21, 2016 (Aashwayuja 29, Shaka Varsha 1938)* | *No. 1191* |


**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 131 ಗುಅಪ್ರಾ 2016, ಬೆಂಗಳೂರು, ದಿನಾಂಕ: 19.10.2016.**

ಸರ್ಕಾರದ ಅಧಿಸೂಚನೆ ಸಂಖ್ಯೆ: ವನಇ 161 ಟಿಟಿಪಿ 1993, ದಿನಾಂಕ: 27.07.1993 ರನ್ವಯ ಘೋಷಿಸಲಾಗಿರುವ ಹೊಸಪೇಟೆ ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 4(ಎ)(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಕರ್ನಾಟಕ ಸರ್ಕಾರವು ತಕ್ಷಣದಿಂದ ಜಾರಿಗೆ ಬರುವಂತೆ ಹೆಚ್ಚುವರಿಯಾಗಿ **09 ಗ್ರಾಮಗಳನ್ನು** ಸೇರಿಸಿ ಹಾಗೂ ಉಪ್ಪಾರಹಳ್ಳಿ ಗ್ರಾಮವನ್ನು ಕೈಬಿಟ್ಟು, ಒಟ್ಟು 26 ಗ್ರಾಮಗಳನ್ನು ಒಳಗೊಂಡ ಹಾಲಿ ಸ್ಥಳೀಯ ಯೋಜನಾ ಪ್ರದೇಶವನ್ನು ವಿಸ್ತರಿಸಲಾಗಿದೆ. ಈಗ ಪ್ರಸ್ತುತ ಹೊಸದಾಗಿ ಸೇರ್ಪಡೆಯಾಗಿರುವ ಗ್ರಾಮಗಳು ಹಾಗೂ ಹಾಲಿ ಇದ್ದ ಸ್ಥಳೀಯ ಯೋಜನಾ ಪ್ರದೇಶದಿಂದ ಉಪ್ಪಾರಹಳ್ಳಿ ಗ್ರಾಮವನ್ನು ಕೈಬಿಟ್ಟು ಉಳಿದ 17 ಗ್ರಾಮಗಳನ್ನು ಒಳಗೊಂಡ ಸ್ಥಳೀಯ ಯೋಜನಾ ಪ್ರದೇಶದ ವಿವರಗಳನ್ನು ಅನುಬಂಧ–1 ರಲ್ಲಿ ಹಾಗೂ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಣೆಗಳನ್ನು ಅನುಬಂಧ–2 ರಲ್ಲಿ ನಮೂದಿಸಲಾಗಿದೆ.

ಸದರಿ ವಿಸ್ತರಿತ ಸ್ಥಳೀಯ ಯೋಜನಾ ಪ್ರದೇಶವನ್ನು ವ್ಯವಸಾಯ ವಲಯವೆಂದು ಪರಿಗಣಿಸಲು ಹಾಗೂ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961 ರ ಕಲಂ 4(ಎ)(4) ರಲ್ಲಿನ ಅವಕಾಶದನ್ವಯ ಈಗಾಗಲೇ ವಿಸ್ತರಿತ ಪ್ರದೇಶದಲ್ಲಿ ಸಕ್ಷಮ ಪ್ರಾಧಿಕಾರಗಳಿಂದ ಅನುಮೋದನೆ ನೀಡಿರುವ ಪ್ರಕರಣಗಳನ್ನು ಸಂರಕ್ಷಿಸಿ ಚಾಲ್ತಿಯಲ್ಲಿರುವ ವಲಯ ನಿಯಮಾವಳಿಗಳನ್ನು ಮಹಾಯೋಜನೆಯನ್ನು ಪರಿಷ್ಕರಿಸಿ ಅನುಮೋದನೆ ಪಡೆಯುವವರೆಗೂ ಅಳವಡಿಸಬಹುದಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಅಧಿಸೂಚನೆ ಸಂಖ್ಯೆ: ನಅಇ 131 ಗುಅಪ್ರಾ 2016ಕ್ಕೆ ಅನುಬಂಧ–1
## ಹಾಲಿ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿನ ಗ್ರಾಮಗಳು

| ಕ್ರ.ಸಂ | ತಾಲೂಕು | ಗ್ರಾಮದ ಹೆಸರು | ಸ್ಥಳೀಯ ಸಂಸ್ಥೆ |
|---|---|---|---|
| 1 | ಹೊಸಪೇಟೆ | ಹೊಸಪೇಟೆ | ನಗರಸಭೆ |
| 2 | ಹೊಸಪೇಟೆ | ಅಮರಾವತಿ | ನಗರಸಭೆ |
| 3 | ಹೊಸಪೇಟೆ | ಮುದ್ಲಾಪುರ | ನಗರಸಭೆ |
| 4 | ಹೊಸಪೇಟೆ | ಅನಂತಶಯನಗುಡಿ | ನಗರಸಭೆ |
| 5 | ಹೊಸಪೇಟೆ | ಸಂಕ್ಲಾಪುರ | ನಗರಸಭೆ |
| 6 | ಹೊಸಪೇಟೆ | ಜಂಬುನಾಥನಹಳ್ಳಿ | ನಗರಸಭೆ |
| 7 | ಹೊಸಪೇಟೆ | ಚಿತ್ತವಾಡ್ಗಿ | ನಗರಸಭೆ |
| 8 | ಹೊಸಪೇಟೆ | ಕಾರಿಗನೂರು | ನಗರಸಭೆ |
| 9 | ಹೊಸಪೇಟೆ | ಹೂಸೂರು | ಗ್ರಾಮ ಪಂಚಾಯಿತಿ (ಹೂಸೂರು) |
| 10 | ಹೊಸಪೇಟೆ | ಕಲ್ಲಿರಾಂಪುರ | ಗ್ರಾಮ ಪಂಚಾಯಿತಿ (ಹಂಪಿ) |
| 11 | ಹೊಸಪೇಟೆ | ಬೆಳಗೋಡು | ಗ್ರಾಮ ಪಂಚಾಯಿತಿ (ನಾಗೇನಹಳ್ಳಿ) |
| 12 | ಹೊಸಪೇಟೆ | ನರಸಪುರ | ಗ್ರಾಮ ಪಂಚಾಯಿತಿ (ಹಂಪಿ) |
| 13 | ಹೊಸಪೇಟೆ | ಕಲ್ಲಹಳ್ಳಿ | ಗ್ರಾಮ ಪಂಚಾಯಿತಿ (ಕಲ್ಲಹಳ್ಳಿ) |
| 14 | ಹೊಸಪೇಟೆ | ರಾಜಾಪುರ | ಗ್ರಾಮ ಪಂಚಾಯಿತಿ (ಕಲ್ಲಹಳ್ಳಿ) |
| 15 | ಹೊಸಪೇಟೆ | ವಡ್ಡರಹಳ್ಳಿ | ಗ್ರಾಮ ಪಂಚಾಯಿತಿ |
| 16 | ಹೊಸಪೇಟೆ | ಇಂಗಳಗಿ | ಗ್ರಾಮ ಪಂಚಾಯಿತಿ |
| 17 | ಹೊಸಪೇಟೆ | ಪಾಪಿನಾಯಕನಹಳ್ಳಿ | ಗ್ರಾಮ ಪಂಚಾಯಿತಿ |

## ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಹೊಸದಾಗಿ ಸೇರಿಸಿದ ಗ್ರಾಮಗಳು

| ಕ್ರ.ಸಂ | ತಾಲೂಕು | ಗ್ರಾಮದ ಹೆಸರು | ಸ್ಥಳೀಯ ಸಂಸ್ಥೆ |
|---|---|---|---|
| 1. | | ಮರಿಯಮ್ಮನಹಳ್ಳಿ | ಪಟ್ಟಣ ಪಂಚಾಯಿತಿ |
| 2. | | ವ್ಯಾಸನಕೆರೆ | ಗ್ರಾಮ ಪಂಚಾಯಿತಿ (**ಡಣಾಪುರ**) |
| 3. | | ವೆಂಕಟಾಪುರ | ಗ್ರಾಮ ಪಂಚಾಯಿತಿ (**ಡಣಾಪುರ**) |
| 4. | | ಆಯ್ಯನಹಳ್ಳಿ | ಗ್ರಾಮ ಪಂಚಾಯಿತಿ (**ಡಣಾಪುರ**) |
| 5. | ಹೊಸಪೇಟೆ | ಡಣಾಪುರ–114 | ಗ್ರಾಮ ಪಂಚಾಯಿತಿ (**ಡಣಾಪುರ**) |
| 6. | | ನಂದಿಬಂಡಿ | ಗ್ರಾಮ ಪಂಚಾಯಿತಿ (ಡಿ.ಎನ್.ಕೆರೆ) |
| 7. | | ಡಣಾನಾಯಕನಕೆರೆ | ಗ್ರಾಮ ಪಂಚಾಯಿತಿ (ಡಿ.ಎನ್.ಕೆರೆ) |
| 8. | | ನಾಗಲಾಪುರ | ಗ್ರಾಮ ಪಂಚಾಯಿತಿ (**ನಾಗಲಾಪುರ**) |
| 9. | | ಗೊಲ್ಲರಹಳ್ಳಿ | ಗ್ರಾಮ ಪಂಚಾಯಿತಿ (**ನಾಗಲಾಪುರ**) |

## ಕೈಬಿಟ್ಟ ಗ್ರಾಮದ ವಿವರ

| ಕ್ರ.ಸಂ | ತಾಲೂಕು | ಗ್ರಾಮದ ಹೆಸರು | ಸ್ಥಳೀಯ ಸಂಸ್ಥೆ |
|---|---|---|---|
| 1 | ಹೊಸಪೇಟೆ | ಉಪ್ಪಾರಹಳ್ಳಿ | ಗ್ರಾಮ ಪಂಚಾಯಿತಿ (**ಮೆಟ್ರಿ**) |

**ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಅಧಿಸೂಚನೆ ಸಂಖ್ಯೆ: ನಅಇ 131 ಗುಅಪ್ರಾ 2016ಕ್ಕೆ ಅನುಬಂಧ–2

## ಹೊಸಪೇಟೆ ಸ್ಥಳೀಯ ಯೋಜನಾ ಪ್ರದೇಶದ ಚಾಲ್ತಿ ಸರಹದ್ದು

**ಉತ್ತರಭಾಗ:**

ಹೊಸಪೇಟೆ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯು ಉತ್ತರ ಭಾಗದಲ್ಲಿ ನರಸಾಪುರ ಗ್ರಾಮದ ವಾಯುವ್ಯ ಮೂಲೆಯಿಂದ ಪ್ರಾರಂಭಗೊಂಡು, ಇದೆ ಗ್ರಾಮದ ಉತ್ತರ ಅಂಚಿನಲ್ಲಿ ಪೂರ್ವಭಿಮುಖವಾಗ ಚಲಿಸಿ ಸದರಿ ಗ್ರಾಮದ ಈಶಾನ್ಯ ಮೂಲೆಯನ್ನು ತಲುಪಿ ನಂತರ ಇದೇ ಗ್ರಾಮದ ಪೂರ್ವ ಅಂಚಿನಲ್ಲಿ ದಕ್ಷಿಣಭಿಮುಖವಾಗಿ ಚಲಿಸಿ ಬೆಳಗೋಡು ಗ್ರಾಮದ ವಾಯುವ್ಯ ಮೂಲೆಯನ್ನು ಸೇರುತ್ತದೆ.ನಂತರ ಇದೇ ಬಿಂದುವಿನಿಂದ ಬೆಳಗೋಡು ಗ್ರಾಮದ ಉತ್ತರ ಗಡಿಯಲ್ಲಿ ಪೂರ್ವಭಿಮುಖವಾಗಿ ಹಾಗೂ ಪೂರ್ವ ಗಡಿಯಲ್ಲಿ ದಕ್ಷಿಣಭಿಮುಖವಾಗಿ ಚಲಿಸಿ ಮುದ್ಲಾಪುರ ಗ್ರಾಮದ ಈಶಾನ್ಯ ಮೂಲೆಯನ್ನು ಸೇರುತ್ತದೆ. ನಂತರ ಮುದ್ಲಾಪುರ ಗ್ರಾಮದ ಈಶಾನ್ಯ ಮೂಲೆಯಿಂದ ಇದೇ ಗ್ರಾಮದ ಪೂರ್ವದ ಅಂಚಿನಲ್ಲಿ ದಕ್ಷಿಣಭಿಮುಖವಾಗಿ ಚಲಿಸಿ ನಂತರ ಉತ್ತರಭಿಮುಖವಾಗಿ ಹಾಗೂ ಪೂರ್ವಭಿಮುಖವಾಗಿ ಚಲಿಸಿ ಅನಂತಶಯನಗುಡಿ ಗ್ರಾಮದ ಉತ್ತರ ಗಡಿಯನ್ನು ತಲುಪುತ್ತದೆ. ನಂತರ ಇದೇ ಬಿಂದುವಿನಿಂದ ಅನಂತಶಯನಗುಡಿ ಗ್ರಾಮದ ಉತ್ತರದ ಗಡಿಯಲ್ಲಿ ಪೂರ್ವಭಿಮುಖವಾಗಿ ನಂತರ ದಕ್ಷಿಣಭಿಮುಖವಾಗಿ ಚಲಿಸಿ ಹೊಸಪೇಟೆ–ಕಂಪ್ಲಿ ರಾಜ್ಯ ಹೆದ್ದಾರಿ–49ನ್ನು ದಾಟಿಕೊಂಡು ಸಂಕ್ಲಾಪುರ ಗ್ರಾಮದ ವಾಯುವ್ಯ ಮೂಲೆಯನ್ನು ತಲುಪುತ್ತದೆ. ಇದೆ ಬಿಂದುವಿನಿಂದ ಸಂಕ್ಲಾಪುರ ಕಾರಿಗನೂರು ಗ್ರಾಮಗಳ ಉತ್ತರ ಗಡಿಯಲ್ಲಿ ಪೂರ್ವಭಿಮುಖವಾಗಿ ಚಲಿಸಿ, ಕಾರಿಗನೂರು ಗ್ರಾಮದ ಪೂರ್ವ ಗಡಿಯಲ್ಲಿ ದಕ್ಷಿಣಭಿಮುಖವಾಗಿ ಚಲಿಸಿ ನಾಲೆಯನ್ನು ದಾಟಿ ಇಂಗಳಗಿ ಗ್ರಾಮದ ಉತ್ತರ ಗಡಿಯನ್ನು ತಲುಪುತ್ತದೆ. ನಂತರ ಇದೇ ಬಿಂದುವಿನಿಂದ ಇಂಗಳಗಿ & ಪಾಪಿನಾಯಕನಹಳ್ಳಿ ಗ್ರಾಮಗಳ ಉತ್ತರ ಗಡಿಯಲ್ಲಿ ಪೂರ್ವಭಿಮುಖವಾಗಿ ಚಲಿಸಿ ಪಾಪಿನಾಯಕನಹಳ್ಳಿ ಕಮಲಾಪುರಕ್ಕೆ ಹೋಗುವ ರಾಷ್ಟ್ರೀಯ ಹೆದ್ದಾರಿ–131 ನ್ನು ದಾಟಿಕೊಂಡು ಪಾಪಿನಾಯಕನಹಳ್ಳಿ ಗ್ರಾಮದ ಈಶಾನ್ಯ ಮೂಲೆಯನ್ನು ತಲುಪುತ್ತದೆ.

**ಪೂರ್ವಭಾಗ:**

ಪಾಪಿನಾಯಕನಹಳ್ಳಿ ಗ್ರಾಮದ ಈಶಾನ್ಯ ಮೂಲೆಯಿಂದ ಅದೇ ಗ್ರಾಮದ ಪೂರ್ವದ ಗಡಿಯಲ್ಲಿ ದಕ್ಷಿಣಭಿಮುಖವಾಗಿ ಚಲಿಸಿ ಸೋಲ್ಲಾಗುರ–ಬಳ್ಳಾರಿ ರಾಷ್ಟ್ರೀಯ ಹೆದ್ದಾರಿ–63ನ್ನು ಮತ್ತು ಗುಂತಕಲ್ಲು ಬ್ರಾಡ್ ಗೇಜ್ ದಾಟಿಕೊಂಡು ನಂತರ ಉತ್ತರಭಿಮುಖವಾಗಿ ಚಲಿಸಿ ವಡ್ಡರಹಳ್ಳಿ ಗ್ರಾಮದ ಆಗ್ನೇಯ ಮೂಲೆಯನ್ನು ತಲುಪುತ್ತದೆ. ನಂತರ ಇದೇ ಬಿಂದುವಿನಿಂದ ವಡ್ಡರಹಳ್ಳಿ ಇಂಗಳಗಿ & ಕಾರಿಗನೂರು ಗ್ರಾಮದ ದಕ್ಷಿಣ ಗಡಿಗಳಲ್ಲಿ ಪಶ್ಚಿಮಭಿಮುಖವಾಗಿ ಚಲಿಸಿ ಸಂಕ್ಲಾಪುರ ಗ್ರಾಮದ ಆಗ್ನೇಯ ಮೂಲೆಯ ಸ.ನಂ.185 ತಲುಪುತ್ತದೆ. ಅಲ್ಲಿಂದ ಜಂಬುನಾಥನಹಳ್ಳಿ ಗ್ರಾಮದ ಪೂರ್ವದ ಗಡಿಗುಂಟ ದಕ್ಷಿಣದ ಕಡೆಗೆ ಚಲಿಸಿ ಗ್ರಾಮದ ಆಗ್ನೇಯ ಮೂಲೆ ಸೇರಿತ್ತದೆ. ನಂತರ ಕಲ್ಲಹಳ್ಳಿ ಗ್ರಾಮದ ಪೂರ್ವದ ಗಡಿಗುಂಟ ದಕ್ಷಿಣದ ಕಡೆಗೆ ಚಲಿಸಿ ರಾಷ್ಟ್ರೀಯ ಹೆದ್ದಾರಿ 49 ದಾಟಿ ದಕ್ಷಿಣದ ಕಡೆಗೆ ಚಲಿಸಿ ಕಲ್ಲಹಳ್ಳಿ ಗ್ರಾಮದ ದಕ್ಷಿಣ ತುದಿಯನ್ನು ಸೇರುತ್ತದೆ. ಅಲ್ಲಿಂದ ದಕ್ಷಿಣದ ಗಡಿಗುಂಟ ಪಶ್ಚಿಮದ ಕಡೆಗೆ ಚಲಿಸಿ ವ್ಯಾಸನಕೆರೆ ಗ್ರಾಮದ ಆಗ್ನೇಯ ಮೂಲೆ ಸೇರುತ್ತದೆ. ನಂತರ ದಣಾಪುರ ಗ್ರಾಮದ ಪೂರ್ವದ ಗಡಿಗುಂಟ ದಕ್ಷಿಣ ಕಡೆಗೆ ಚಲಿಸಿ ಗ್ರಾಮದ ಆಗ್ನೇಯ ಮೂಲೆ ಸೇರುತ್ತದೆ. ನಂತರ ನಗಲಾಪುರ ಭಾಗ–1ಈಶಾನ್ಯ ಮೂಲೆಯಿಂದ ದಕ್ಷಿಣದ ಕಡೆಗೆ ಚಲಿಸಿ ಹೊಸಪೇಟೆ–ಯಶವಂತನಗರ ರೇಲ್ವೆ ಮಾರ್ಗವನ್ನು ದಾಟಿ ನಂತರ ಗ್ರಾಮದ ದಕ್ಷಿಣದ ಗಡಿಗುಂಟ ವಿವಿಧ ದಿಕ್ಕುಗಳಲ್ಲಿ ಚಲಿಸಿ ನಾಗಲಾಪುರ ಗ್ರಾಮದ ನೈರುತ್ಯ ಮೂಲೆಯನ್ನು ಸೇರುತ್ತದೆ. ನಂತರ ಡಣಾನಾಯಕನಕೆರೆ ಗ್ರಾಮದ ಈಶಾನ್ಯ ಮೂಲೆಯಿಂದ ಪ್ರಾರಂಭಗೊಂಡು ಪೂರ್ವದ ಗಡಿಗುಂಟ ದಕ್ಷಿಣದ ಕಡೆಗೆ ಚಲಿಸಿ ಗ್ರಾಮದ ಪೂರ್ವ ತುದಿಯನ್ನು ಸೇರುತ್ತದೆ. ಅಲ್ಲಿಂದ ನಾಗಲಾಪುರ ಭಾಗ–2 ಗ್ರಾಮದ ವಾಯುವ್ಯ ಮೂಲೆಯಿಂದ ಪ್ರಾರಂಭಗೊಂಡು ಉತ್ತರದ ಗಡಿಗುಂಟ ಪೂರ್ವದ ಕಡೆಗೆ ಚಲಿಸಿ ಗ್ರಾಮದ ಈಶಾನ್ಯ ತುದಿ ಸೇರುತ್ತದೆ.

**ದಕ್ಷಿಣ ಭಾಗ:**

ನಾಗಲಾಪುರ ಭಾಗ–2 ಗ್ರಾಮದ ಈಶಾನ್ಯ ತುದಿಯಿಂದ ಪೂರ್ವದ ಗಡಿಗುಂಟ ದಕ್ಷಿಣದ ಕಡೆಗೆ ಚಲಿಸಿ ಗ್ರಾಮದ ನೈರುತ್ಯ ಮೂಲೆಯನ್ನು ಸೇರುತ್ತದೆ.ಅಲ್ಲಿಂದ ಗೊಲ್ಲರಹಳ್ಳಿ ಗ್ರಾಮದ ಆಗ್ನೇಯ ಮೂಲೆಯಿಂದ ದಕ್ಷಿಣದ ಗಡಿಗುಂಟ ವಿವಿಧ ದಿಕ್ಕುಗಳಲ್ಲಿ ಚಲಿಸಿ ಗ್ರಾಮದ ನೈರುತ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಡಣಾನಾಯಕನಕರೆ ಗ್ರಾಮದ ಆಗ್ನೇಯ ಮೂಲೆಯಿಂದ ದಕ್ಷಿಣದ ಕಡೆಗೆ ಚಲಿಸಿ ರಾಷ್ಟ್ರೀಯ ಹೆದ್ದಾರಿ 13 ದಾಟಿ ಗ್ರಾಮದ ಪಶ್ಚಿಮದ ಗಡಿಗುಂಟ ಉತ್ತರಕ್ಕೆ ಚಲಿಸಿ ಡಣಾನಾಯಕನಕೆರೆ ಗ್ರಾಮದ ವಾಯುವ್ಯ ಸೇರುತ್ತದೆ. ಅಲ್ಲಿಂದ ನಂದಿಬಂಡಿ ಗ್ರಾಮದ ಆಗ್ನೇಯ ಮೂಲೆಯಿಂದ ದಕ್ಷಿಣ ಗಡಿಗುಂಟ ಪಶ್ಚಿಮಕ್ಕೆ ಚಲಿಸಿ ಗ್ರಾಮದ ದಕ್ಷಿಣ ತುದಿಯನ್ನು ಸೇರುತ್ತದೆ.

**ಪಶ್ಚಿಮ ಭಾಗ:**

ಮುಂದುವರೆದು, ನಂದಿಬಂಡಿ ಗ್ರಾಮದ ದಕ್ಷಿಣ ತುದಿಯಿಂದ ಪಶ್ಚಿಮದ ಗಡಿಗುಂಟ ಉತ್ತರದ ಕಡೆಗೆ ಚಲಿಸಿ,ಹೊಸಪೇಟೆ–ಕೊಟ್ಟೂರು ರೈಲ್ವೆ ಮಾರ್ಗ ದಾಟಿ ಪಶ್ಚಿಮದ ಗಡಿಗುಂಟ ಉತ್ತರದ ಕಡೆಗೆ ಚಲಿಸಿ ರಾಜ್ಯ ಹೆದ್ದಾರಿ–25 ದಾಟಿ ಗ್ರಾಮದ ಪಶ್ಚಿಮ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಗ್ರಾಮದ ಪಶ್ಚಿಮದ ಗಡಿಗುಂಟ ಪೂರ್ವಕ್ಕೆ ನಂತರ ಉತ್ತರಕ್ಕೆ ಚಲಿಸಿ ನಂತರ ಉತ್ತರದ ಕಡೆಗೆ ಚಲಿಸಿ ನಂದಿಬಂಡಿ ಗ್ರಾಮದ ವಾಯುವ್ಯ ಮೂಲೆಯನ್ನು ಸೇರುತ್ತದೆ.ಅಲ್ಲಿಂದ ಅಯ್ಯನಹಳ್ಳಿ ಗ್ರಾಮದ ನೈರುತ್ಯ ಮೂಲೆಯಿಂದ ಪಶ್ಚಿಮದ ಗಡಿಗುಂಟ ಉತ್ತರ ಮತ್ತು ಪೂರ್ವದ ಕಡೆಗೆ ಚಲಿಸಿ ಗ್ರಾಮದ ವಾಯುವ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ವೆಂಕಟಾಪುರ ಗ್ರಾಮದ ನೈರುತ್ಯ ಪಶ್ಚಿಮದ ಗಡಿಗುಂಟ ಉತ್ತರದ ಕಡೆಗೆ ಚಲಿಸಿ ಗ್ರಾಮದ ವಾಯುವ್ಯ ಮೂಲೆಯನ್ನು ಸೇರುತ್ತದೆ. ನಂತರ ಗ್ರಾಮದ ಉತ್ತರದ ಗಡಿಗುಂಟ ಪೂರ್ವದ ಕಡೆಗೆ ಚಲಿಸಿ ಈಶಾನ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ವ್ಯಾಸನಕೆರೆ ಗ್ರಾಮದ ಪಶ್ಚಿಮದ ಗಡಿಗುಂಟ ಉತ್ತರಕ್ಕೆ ಚಲಿಸಿ ಗ್ರಾಮದ ಸವಾಯುವ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಗ್ರಾಮದ ಉತ್ತರದ ಗಡಿಗುಂಟ ಪೂರ್ವ ಮತ್ತು ವಿವಿಧ ದಿಕ್ಕಿನಲ್ಲಿ ಚಲಿಸಿ ಗ್ರಾಮದ ಈಶಾನ್ಯ ಮೂಲೆಯನ್ನು ಸೇರುತ್ತದೆ.ನಂತರ ಜಂಬುನಾಥನಹಳ್ಳಿ ಗ್ರಾಮದ ನೈರುತ್ಯ ಮೂಲೆಯಿಂದ ಪ್ರಾರಂಭಗೊಂಡು ಪಶ್ಚಿಮದ ಗಡಿಗುಂಟ ತುಂಗಾಭದ್ರ ಜಲಾಶಯದ ಹಿನ್ನೀರಿನ ಭಾಗದ ಉದ್ದಕ್ಕೂ ಉತ್ತರಕ್ಕೆ ಚಲಿಸಿ ಜಂಬುನಾಥನಹಳ್ಳಿ ಗ್ರಾಮದ ವಾಯುವ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಅಮರಾವತಿ ಗ್ರಾಮದ ನೈರುತ್ಯ ಮೂಲೆಯಿಂದ ಪಶ್ಚಿಮದ ಗಡಿಗುಂಟ ಉತ್ತರಕ್ಕೆ ಪೂರ್ವಕ್ಕೆ ಚಲಿಸಿ ರಾಷ್ಟ್ರೀಯ ಹೆದ್ದಾರಿ–63 ದಾಟಿ ಗ್ರಾಮದ ವಾಯುವ್ಯ ಮೂಲೆಯನ್ನು ಸೇರುತ್ತದೆ. ಅಲ್ಲಿಂದ ಹೊಸೂರು ಗ್ರಾಮದ ನೈರುತ್ಯ ಮೂಲೆಯಿಂದ ಪಶ್ಚಿಮದ ಗಡಿಗುಂಟ ಉತ್ತರಕ್ಕೆ ಚಲಿಸಿ ಗುಂತಕಲ್–ಹುಬ್ಬಳ್ಳಿ ರೈಲ್ವೆ ಮಾರ್ಗ ದಾಟಿ ವಿವಿಧ ದಿಕ್ಕಿಗಳಲ್ಲಿ ಚಲಿಸಿ ಗ್ರಾಮದ ಈಶಾನ್ಯ ಮೂಲೆಯನ್ನು ಸೇರುತ್ತದೆ. ನಂತರ ನರಸಾಪುರ ಗ್ರಾಮದ ಪಶ್ಚಿಮ ದಿಕ್ಕಿನ ಗಡಿಗುಂಟ ಉತ್ತರಕ್ಕೆ ಚಲಿಸಿ ಎ ಬಿಂದುವನ್ನು ಸೇರುತ್ತದೆ.

**ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 100

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ–III | ಬೆಂಗಳೂರು, ಸೋಮವಾರ, ಅಕ್ಟೋಬರ್ ೨೪, ೨೦೧೬ (ಕಾರ್ತಿಕ ೨, ಶಕ ವರ್ಷ ೧೯೩೮) | ನಂ. ೧೧೯೨ |
|---|---|---|
| **Part–III** | **Bengaluru, Monday, October 24, 2016 (Karthika 2, Shaka Varsha 1938)** | **No. 1192** |


**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 60 ಸೇಲೋಆ 2016, ಬೆಂಗಳೂರು, ದಿನಾಂಕ: 22.10.2016.**

ಕರ್ನಾಟಕ ಲೋಕಸೇವಾ ಆಯೋಗದಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸುತ್ತಿರುವ ಡಾ॥ ಹೆಚ್.ವಿ.ಪಾರ್ಶ್ವನಾಥ್ ಇವರ ಪದಾವಧಿಯು ಸಂವಿಧಾನದ ಅನುಚ್ಛೇದ 316(2)ರನ್ವಯ ದಿ:24.10.2016ರ ಅಪರಾಹ್ನ ಮುಗಿಯಲಿದೆ. ವಿವರಗಳು ಕೆಳಕಂಡಂತಿವೆ:–

| ಕ್ರ.ಸ. | ಹೆಸರು | ಜನ್ಮ ದಿನಾಂಕ | ಅಧಿಕಾರ ವಹಿಸಿಕೊಂಡ ದಿನಾಂಕ | ನಿವೃತ್ತರಾಗಲಿರುವ ದಿನಾಂಕ |
|---|---|---|---|---|
| 1 | ಡಾ॥ ಹೆಚ್.ವಿ. ಪಾರ್ಶ್ವನಾಥ್ | 16.08.1955 | 25.10.2010 | 24.10.2016 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಎನ್. ಬಸವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವೆಗಳು–7).

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 25

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–III | ಬೆಂಗಳೂರು, ಸೋಮವಾರ, ಅಕ್ಟೋಬರ್ ೨೪, ೨೦೧೬ (ಕಾರ್ತಿಕ ೨, ಶಕ ವರ್ಷ ೧೯೩೮) | ನಂ. ೧೧೯೪ |
|---|---|---|
| Part–III | Bengaluru, Monday, October 24, 2016 (Karthika 2, Shaka Varsha 1938) | No. 1194 |

**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ** : ಗ್ರಾಮ ಪಂಚಾಯ್ತಿಗಳ ಮೂಲಕ ಪಡಿತರ ಚೀಟಿದಾರರಿಗೆ ಕೂಪನ್ ವಿತರಿಸುವ ಬಗ್ಗೆ

**ಪ್ರಸ್ತಾವನೆ:–**

ರಾಜ್ಯದಲ್ಲಿ ನ್ಯಾಯಬೆಲೆ ಅಂಗಡಿಗಳಲ್ಲಿ ಪಡಿತರ ಚೀಟಿದಾರರಿಗೆ ಪಡಿತರ ವಿತರಣೆಯನ್ನು ಖಾತರಿಪಡಿಸುವ ಸಲುವಾಗಿ ಕೂಪನ್ ವ್ಯವಸ್ಥೆಯನ್ನು ಜಾರಿಗೆ ತರಲಾಗಿರುತ್ತದೆ. ಈ ವ್ಯವಸ್ಥೆಯಡಿ ಪಡಿತರ ಚೀಟಿದಾರನು ಕೂಪನ್‌ಗಳನ್ನು ಪಡೆದು ನ್ಯಾಯಬೆಲೆ ಅಂಗಡಿಗಳಲ್ಲಿ ಸರ್ಕಾರವು ನಿಗಧಿಪಡಿಸಿದ ಪ್ರಮಾಣ ಮತ್ತು ದರದಲ್ಲಿ ಪಡಿತರವನ್ನು ಪಡೆಯಲು ಅನುಕೂಲವಾಗಿರುತ್ತದೆ. ಪ್ರಸ್ತುತ ಕೂಪನ್‌ಗಳನ್ನು ನಗರ ಪ್ರದೇಶಗಳಲ್ಲಿ ಕರ್ನಾಟಕ–ಒನ್, ಬೆಂಗಳೂರು–ಒನ್ ಮತ್ತು ಖಾಸಗಿ ಫೋಟೋ ಬಯೋ ಸೇವಾ ಕೇಂದ್ರ (ಫ್ರಾಂಚೈಸಿ)ಗಳ ಮೂಲಕ ನೀಡಲಾಗುತ್ತಿದ್ದು, ಪಡಿತರ ಚೀಟಿದಾರರು ತಮ್ಮ ವ್ಯಾಪ್ತಿಯ ಸೇವಾ ಕೇಂದ್ರಗಳಿಗೆ ಭೇಟಿ ನೀಡಿ ಆಧಾರ್ ಸಂಖ್ಯೆ ಮತ್ತು ಬಯೋಮೆಟ್ರಿಕ್ ದೃಢೀಕರಣ ದಾಖಲಿಸಿ ತಮಗೆ ಸಂಬಂಧಿಸಿದ ಕೂಪನ್‌ಗಳನ್ನು ಪಡೆಯಬಹುದಾಗಿರುತ್ತದೆ. ಅಲ್ಲದೇ, ಪಡಿತರ ಚೀಟಿದಾರರು ತಮ್ಮ ಮೊಬೈಲ್ ಸಂಖ್ಯೆಗಳನ್ನು ಆಧಾರ್ ಸಂಖ್ಯೆಗೆ ಜೋಡಣೆ ಮಾಡುವ ಮೂಲಕ ತಮ್ಮ ಮೊಬೈಲ್‌ಗಳ ಮೂಲಕವೇ ಕೂಪನ್‌ಗಳನ್ನು ಪಡೆಯಲು ಸಹ ಅವಕಾಶವಿರುತ್ತದೆ.

ಕೂಪನ್ ವ್ಯವಸ್ಥೆಯನ್ನು ಗ್ರಾಮಾಂತರ ಪ್ರದೇಶದಲ್ಲಿ ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅನುಕೂಲವಾಗುವಂತೆ ಗ್ರಾಮಪಂಚಾಯ್ತಿಗಳ ಮೂಲಕ ಪಡಿತರ ಚೀಟಿದಾರರಿಗೆ ಕೂಪನ್ ವಿತರಿಸುವ ಜವಾಬ್ದಾರಿಯನ್ನು ನೀಡಲು ಉದ್ದೇಶಿಸಿದೆ. ಅಲ್ಲದೇ, ಪಡಿತರ ಚೀಟಿದಾರರು ಮೊಬೈಲ್ ಮೂಲಕ ಕೂಪನ್‌ಗಳನ್ನು ಪಡೆಯುವ ಆಯ್ಕೆಯನ್ನು ಸಹ ಕಲ್ಪಿಸಲು ತೀರ್ಮಾನಿಸಲಾಗಿದೆ. ಇದರಿಂದಾಗಿ, ಪಡಿತರ ಚೀಟಿದಾರರು ಪದೇ ಪದೇ ಕೂಪನ್ ಪಡೆಯಲು ಗ್ರಾಮಪಂಚಾಯ್ತಿಗಳಿಗೆ ಹೋಗುವ ಅವಶ್ಯಕತೆ ಇರುವುದಿಲ್ಲ. ಮೊಬೈಲ್ ಇಲ್ಲದೇ ಇರುವಂತಹ ಪಡಿತರ ಚೀಟಿದಾರರು ಗ್ರಾಮಪಂಚಾಯ್ತಿಗಳಿಗೆ ತೆರಳಿ ಬಯೋಮೆಟ್ರಿಕ್ ಮೂಲಕ ತಮ್ಮ ದೃಢೀಕರಣವನ್ನು ದಾಖಲಿಸಿ ಭೌತಿಕವಾಗಿ ಕೂಪನ್‌ಗಳನ್ನು ಪಡೆಯಬಹುದಾಗಿರುತ್ತದೆ. ಅದರಂತೆ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 12 ಡಿಆರ್ಎ 2015 (ಭಾಗ–2), ಬೆಂಗಳೂರು, ದಿನಾಂಕ: 24.10.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗ್ರಾಮಾಂತರ ಪ್ರದೇಶದಲ್ಲಿ ಪಡಿತರ ಚೀಟಿದಾರರಿಗೆ ಉಚಿತವಾಗಿ ಕೂಪನ್ ವಿತರಿಸುವ ಜವಾಬ್ದಾರಿಯನ್ನು ಗ್ರಾಮಪಂಚಾಯ್ತಿಗಳಿಗೆ ವಹಿಸಲಾಗಿದೆ. ಕೂಪನ್ ವಿತರಣೆಗೆ ನಿಗಧಿಪಡಿಸಿರುವ ಮೊತ್ತವನ್ನು ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ ಇವರು ಗ್ರಾಮಪಂಚಾಯ್ತಿಗಳಿಗೆ ನೇರವಾಗಿ ಬಿಡುಗಡೆಗೊಳಿಸತಕ್ಕದ್ದು.

ಪಡಿತರ ಚೀಟಿದಾರರಿಗೆ ಗ್ರಾಮಪಂಚಾಯ್ತಿಗಳು ಫಲಾನುಭವಿಗಳ ಬಯೋಮೆಟ್ರಿಕ್ ದೃಢೀಕರಣವನ್ನು ಪಡೆದು, ಪಂಚತಂತ್ರ ತಂತ್ರಾಶದ ಮೂಲಕ ಭೌತಿಕವಾಗಿ ಕೂಪನ್‌ಗಳನ್ನು ವಿತರಿಸತಕ್ಕದ್ದು; ಇದಕ್ಕೆ ಅಗತ್ಯವಿರುವ ತಾಂತ್ರಿಕ ಸಹಾಯವನ್ನು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ ಹಾಗೂ ಇ–ಆಡಳಿತ ಕೇಂದ್ರ ಒದಗಿಸತಕ್ಕದ್ದು.

ಮೊಬೈಲ್ ಮೂಲಕ ಪಡಿತರ ಕೂಪನ್‌ಗಳನ್ನು ಪಡೆಯಲು ಅನುವಾಗುವಂತೆ, ಗ್ರಾಮಪಂಚಾಯ್ತಿಗಳು ಪಡಿತರ ಚೀಟಿದಾರರ ಮೊಬೈಲ್ ಸಂಖ್ಯೆಗಳನ್ನು ಆಧಾರ್ ದತ್ತಾಂಶದೊಂದಿಗೆ ಜೋಡಣೆ ಮಾಡಲು ಕ್ರಮವಹಿಸತಕ್ಕದ್ದು ಹಾಗೂ ಇದಕ್ಕೆ ಅಗತ್ಯವಿರುವ ತಂತ್ರಾಂಶವನ್ನು ಮತ್ತು ಸದರಿ ಉದ್ದೇಶಕ್ಕಾಗಿ ಬಳಸಲಾಗುವ ಡಾಟಾ ಎಂಟ್ರಿ ಆಪರೇಟರ್‌ಗಳಿಗೆ ಅಗತ್ಯ ತರಬೇತಿಯನ್ನು ಇ–ಆಡಳಿತ ಕೇಂದ್ರವು ನೀಡತಕ್ಕದ್ದು.

ಪಡಿತರ ಚೀಟಿದಾರರು ಕೂಪನ್‌ಗಳನ್ನು ಗ್ರಾಮ ಪಂಚಾಯ್ತಿಗಳ ಅಥವಾ ತಮ್ಮ ನೊಂದಾಯಿತ ಮೊಬೈಲ್‌ಗಳ ಮೂಲಕ ಪಡೆಯಬಹುದಾಗಿದೆ. ಪಡಿತರ ಚೀಟಿದಾರರು ತಮ್ಮ ಮೊಬೈಲ್ ಮೂಲಕವೇ ಕೂಪನ್‌ಗಳನ್ನು ಪಡೆಯಲು ಪಂಚಾಯ್ತಿ ಅಭಿವೃದ್ಧಿ ಅಧಿಕಾರಿಗಳು ಜಾಗೃತಿ ಮೂಡಿಸತಕ್ಕದ್ದು.

ಈ ಆದೇಶವನ್ನು ಗ್ರಾಮೀಣಾಭಿವೃದ್ದಿ ಪಂಚಾಯತ್ ರಾಜ್ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಗ್ರಾಅಪ/131/ಉಖಾಯೋ/2016, ದಿನಾಂಕ 20.10.2016ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅರ್ಚನ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ,

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 200

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ-*III* | ಬೆಂಗಳೂರು, ಬುಧವಾರ, ಅಕ್ಟೋಬರ್ ೨೬, ೨೦೧೬ (ಕಾರ್ತೀಕ ೪, ಶಕ ವರ್ಷ ೧೯೩೮) | ನಂ. ೧೧೯೮ |
| ***Part–III*** | ***Bengaluru, Wednesday, October 26, 2016 (Karthika 4, Shaka Varsha 1938)*** | ***No. 1198*** |


**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಂಡಳಿ ಕಟ್ಟಡ (ಹಿಂಭಾಗ), 1ನೇ ಮಹಡಿ, ನಂ.8, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು-52

**ರಾಜ್ಯ ಚುನಾವಣಾ ಆಯೋಗದ ಆದೇಶ ಸಂಖ್ಯೆ : ರಾಚುಆ 125 ಇಯುಬಿ 2016**
**ಬೆಂಗಳೂರು, ದಿನಾಂಕ.26-10-2016**

ರಾಜ್ಯ ಚುನಾವಣಾ ಆಯೋಗವು ಈ ಕೆಳಗೆ ನಮೂದಿಸಿರುವ ಚುನಾವಣಾ ವೇಳಾಪಟ್ಟಿಯಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವಾರ್ಡ್ ನಂ.146 (ಲಕ್ಕಸಂದ್ರ ವಾರ್ಡ್) ರಲ್ಲಿ ತೆರವಾಗಿರುವ ಸದಸ್ಯ ಸ್ಥಾನಕ್ಕೆ ಉಪಚುನಾವಣೆಯನ್ನು ನಡೆಸಲು ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣೆ) ನಿಯಮಗಳು 1979 ರ ನಿಯಮ 3 (1) ರಂತೆ ಆದೇಶಿಸಿದೆ.

**ಚುನಾವಣಾ ವೇಳಾಪಟ್ಟಿ**

| | | |
|---|---|---|
| 1 | ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರಪಾಲಿಕೆ ರವರು ಚುನಾವಣಾ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ದಿನ | 02-11-2016 (ಬುಧವಾರ) |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 09-11-2016 (ಬುಧವಾರ) |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 10-11-2016 (ಗುರುವಾರ) |
| 4 | ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 12-11-2016 (ಶನಿವಾರ) |
| 5 | ಮತದಾನ ಅವಶ್ಯವಿದ್ದರೆ, ಮತದಾನ ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ) | 20-11-2016 (ಭಾನುವಾರ) |
| 6 | ಮರುಮತದಾನ ಇದ್ದಲ್ಲಿ ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ | 22-11-2016 (ಮಂಗಳವಾರ) |
| 7 | ಮತ ಎಣಿಕೆಯು ಬೆಳಿಗ್ಗೆ 8.00 ಗಂಟೆಯಿಂದ | 23-11-2016 (ಬುಧವಾರ) |
| 8 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 23-11-2016 (ಬುಧವಾರ) |

ಆಯುಕ್ತರು, ಬಿ.ಬಿ.ಎಂ.ಪಿ. ರವರು ಆಯೋಗವು ಆದೇಶಿಸಿರುವ ಚುನಾವಣಾ ವೇಳಾಪಟ್ಟಿಯನ್ನು ಅನುಸರಿಸಿ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣೆ) ನಿಯಮಗಳು 1979ರ ನಿಯಮ 10ರ ಪ್ರಕಾರ ಅಧಿಸೂಚನೆಯನ್ನು ಪ್ರಪತ್ರ–1 ರಂತೆ ಹೊರಡಿಸತಕ್ಕದ್ದು. ಹಾಗೆಯೇ ಹೊರಡಿಸಲಾದ ಅಧಿಸೂಚನೆಯನ್ನು ಅದೇ ದಿನದಂದು ವಿಶೇಷ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು. ಪ್ರಕಟಿತ ಅಧಿಸೂಚನೆಯನ್ನು ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಜಿಲ್ಲಾಧಿಕಾರಿಗಳ ಕಛೇರಿ, ಸಂಬಂಧ ಪಟ್ಟ ವಾರ್ಡ್ ಕಛೇರಿ ಹಾಗೂ ಇನ್ನಿತರ ಮುಖ್ಯ ಸ್ಥಳಗಳಲ್ಲಿಯೂ ಸಹ ಪ್ರಕಟಿಸತಕ್ಕದ್ದು. ಅಧಿಸೂಚನೆಯ ಪ್ರತಿಯನ್ನು ಚುನಾವಣಾಧಿಕಾರಿಗಳಿಗೆ ಕಳುಹಿಸಿಕೊಟ್ಟು ಅದೇ ದಿನದಂದು ಪ್ರಪತ್ರ 1 ಎ ರಲ್ಲಿ ಚುನಾವಣಾ ನೋಟೀಸನ್ನು ಪ್ರಕಟಿಸುವಂತೆ ಅವರಿಗೆ ಸೂಚನೆಗಳನ್ನು ನೀಡತಕ್ಕದ್ದು. ಚುನಾವಣೆ ನಡೆಯುವ ವಿಷಯವನ್ನು ಸಾರ್ವಜನಿಕರ ಮಾಹಿತಿಗಾಗಿ ದಿನಪತ್ರಿಕೆಗಳಲ್ಲಿ ಹಾಗೂ ಸ್ಥಳೀಯ ಪತ್ರಿಕೆಗಳಲ್ಲಿ (ವೆಚ್ಚ ಬಾರದಂತೆ) ಪ್ರಕಟಿಸಲು ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.

ಸದಾಚಾರ ಸಂಹಿತೆಯು ದಿ:26–10–2016 ರಿಂದಲೇ ಜಾರಿಗೆ ಬಂದಿದ್ದು ಚುನಾವಣಾ ಪ್ರಕ್ರಿಯೆಯು ಮುಕ್ತಾಯಗೊಳ್ಳುವವರೆಗೆ ಅಂದರೆ ದಿನಾಂಕ:23–11–2016 ರವರೆಗೆ ಚುನಾವಣೆ ನಡೆಯುವ ಬಿ.ಬಿ.ಎಂ.ಪಿ. ವಾರ್ಡ್ 146ರ ವ್ಯಾಪ್ತಿಯಲ್ಲಿ ಮಾತ್ರ ಜಾರಿಯಲ್ಲಿರುತ್ತದೆ. ಸದಾಚಾರ ಸಂಹಿತೆಯು ಯಾವುದೇ ರೀತಿಯಲ್ಲೂ ಉಲ್ಲಂಘನೆಯಾಗದಂತೆ ಜಿಲ್ಲಾ ಚುನಾವಣಾಧಿಕಾರಿಯವರು ಕ್ರಮವಹಿಸತಕ್ಕದ್ದು.

ಆದೇಶಾನುಸಾರ

**ನಾಗರಾಜು ಎನ್.ಆರ್.**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ
ಕರ್ನಾಟಕ, ಬೆಂಗಳೂರು

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 25

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ-III | ಬೆಂಗಳೂರು, ಬುಧವಾರ, ಅಕ್ಟೋಬರ್ ೨೬, ೨೦೧೬ (ಕಾರ್ತೀಕ ೪, ಶಕ ವರ್ಷ ೧೯೩೮) | ನಂ. ೧೧೯೯ |
|---|---|---|
| Part-III | Bengaluru, Wednesday, October 26, 2016 (Karthika 4, Shaka Varsha 1938) | No. 1199 |


**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಂಡಳಿ ಕಟ್ಟಡ (ಹಿಂಭಾಗ), 1ನೇ ಮಹಡಿ, ನಂ.8, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು-52

**ರಾಜ್ಯ ಚುನಾವಣಾ ಆಯೋಗದ ಆದೇಶ ಸಂಖ್ಯೆ : ರಾಚುಆ 117 ಇಯುಬಿ 2016**
**ಬೆಂಗಳೂರು, ದಿನಾಂಕ. 26-10-2016**

ರಾಜ್ಯ ಚುನಾವಣಾ ಆಯೋಗವು ಕೆಳಗೆ ನಮೂದಿಸಿರುವ ನಗರ ಸ್ಥಳೀಯ ಸಂಸ್ಥೆಗಳ ವಾರ್ಡುಗಳ ವಿವಿಧ ಕಾರಣಗಳಿಂದ ತೆರವಾಗಿರುವ ಸದಸ್ಯ ಸ್ಥಾನಕ್ಕೆ ಈ ಕೆಳಗಿನ ಚುನಾವಣಾ ವೇಳಾಪಟ್ಟಿಯಂತೆ ಉಪಚುನಾವಣೆಯನ್ನು ನಡೆಸಲು ಕರ್ನಾಟಕ ಮುನಿಸಿಪಾಲಿಟೀಸ್ (ಕೌನ್ಸಿಲರುಗಳ ಚುನಾವಣೆ) ನಿಯಮಗಳು 1977 ರ ನಿಯಮ 3 (1) ರಂತೆ ಆದೇಶಿಸಿದೆ.

| ಕ್ರ.ಸಂ | ಜಿಲ್ಲೆಯ ಹೆಸರು | ನಗರ ಸ್ಥಳೀಯ ಸಂಸ್ಥೆಯ ಹೆಸರು | ವಾರ್ಡ್ ನಂ. |
|---|---|---|---|
| 1 | ದಾವಣಗೆರೆ | ಹರಿಹರ ನಗರಸಭೆ | 18 |
| 2 | ಶಿವಮೊಗ್ಗ | ಭದ್ರಾವತಿ ನಗರಸಭೆ | 31 |
| 3 | ಗದಗ | ಮುಳಗುಂದ ಪಟ್ಟಣ ಪಂಚಾಯತಿ | 1 |
| 4 | ಬೆಳಗಾವಿ | ಗೋಕಾಕ್ ನಗರಸಭೆ | 5 |
| 5 | ಬಾಗಲಕೋಟೆ | ಅಮೀನಗಡ ಪಟ್ಟಣಪಂಚಾಯತಿ | 7 |
| 6 | ಉತ್ತರಕನ್ನಡ | ಕಾರವಾರ ನಗರಸಭೆ | 10 |
| 7 | ಧಾರವಾಡ | ಕಲಘಟಗಿ ಪಟ್ಟಣ ಪಂಚಾಯತಿ | 4 |
| 8 | ವಿಜಯಪುರ | ಬಸವನಬಾಗೇವಾಡಿ ಪುರಸಭೆ | 10 |
| 9 | ಬಳ್ಳಾರಿ | ಮರಿಯಮ್ಮನಹಳ್ಳಿ ಪಟ್ಟಣಪಂಚಾಯತಿ | 12 |
| 10 | ಹಾವೇರಿ | ಹಾವೇರಿ ನಗರಸಭೆ | 4 |
| | | ಹಾನಗಲ್ ಪುರಸಭೆ | 6 |

**ಚುನಾವಣಾ ವೇಳಾಪಟ್ಟಿ**

| | | |
|---|---|---|
| 1 | ಜಿಲ್ಲಾಧಿಕಾರಿಗಳು, ಚುನಾವಣಾ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ದಿನ | 02–11–2016 (ಬುಧವಾರ) |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 09–11–2016 (ಬುಧವಾರ) |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 10–11–2016 (ಗುರುವಾರ) |
| 4 | ಉಮೇದುವಾರಿಕೆಯನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 12–11–2016 (ಶನಿವಾರ) |
| 5 | ಮತದಾನ ಅವಶ್ಯವಿದ್ದರೆ, ಮತದಾನ ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ) | 20–11–2016 ಭಾನುವಾರ) |
| 6 | ಮರುಮತದಾನ ಇದ್ದಲ್ಲಿ ಮತದಾನದ ಸಮಯ ಬೆಳಿಗ್ಗೆ 7.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯವರೆಗೆ | 22–11–2016 (ಮಂಗಳವಾರ) |
| 7 | ಮತ ಎಣಿಕೆಯು ಬೆಳಿಗ್ಗೆ 8.00 ಗಂಟೆಯಿಂದ | 23–11–2016 (ಬುಧವಾರ) |
| 8 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 23–11–2016 (ಬುಧವಾರ) |

ಜಿಲ್ಲಾಧಿಕಾರಿಗಳು, ದಾವಣಗೆರೆ, ಶಿವಮೊಗ್ಗ, ಗದಗ, ಬೆಳಗಾವಿ, ಬಾಗಲಕೋಟೆ, ಉತ್ತರಕನ್ನಡ, ಧಾರವಾಡ, ವಿಜಯಪುರ, ಹಾವೇರಿ, ಮತ್ತು ಬಳ್ಳಾರಿ ಜಿಲ್ಲೆ ರವರು ಆಯೋಗವು ಆದೇಶಿಸಿರುವ ಚುನಾವಣಾ ವೇಳಾಪಟ್ಟಿಯನ್ನು ಅನುಸರಿಸಿ ಕರ್ನಾಟಕ ಮುನಿಸಿಪಾಲಿಟೀಸ್ (ಕೌನ್ಸಿಲರ್‌ಗಳ ಚುನಾವಣೆ) ನಿಯಮಗಳು, 1977 ರ ನಿಯಮ 8 ರ ಪ್ರಕಾರ ಅಧಿಸೂಚನೆಯನ್ನು ಪ್ರಪತ್ರ–1 ರಂತೆ ಹೊರಡಿಸತಕ್ಕದ್ದು. ಹಾಗೆಯೇ ಹೊರಡಿಸಲಾದ ಅಧಿಸೂಚನೆಯನ್ನು ಅದೇ ದಿನದಂದು ವಿಶೇಷ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು. ಪ್ರಕಟಿತ ಅಧಿಸೂಚನೆಯನ್ನು ಜಿಲ್ಲಾಧಿಕಾರಿಗಳ ಕಛೇರಿ, ಸಂಬಂಧಪಟ್ಟ ವಾರ್ಡ್ / ನಗರ ಸ್ಥಳೀಯ ಸಂಸ್ಥೆಗಳ ಕಛೇರಿ ಹಾಗೂ ಇನ್ನಿತರ ಮುಖ್ಯ ಸ್ಥಳಗಳಲ್ಲಿಯೂ ಸಹ ಪ್ರಕಟಿಸತಕ್ಕದ್ದು. ಅಧಿಸೂಚನೆಯ ಪ್ರತಿಯನ್ನು ಚುನಾವಣಾಧಿಕಾರಿಗಳಿಗೆ ಕಳುಹಿಸಿಕೊಟ್ಟು ಅದೇ ದಿನದಂದು ಪ್ರಪತ್ರ –1 ಎ ರಲ್ಲಿ ಚುನಾವಣಾ ನೋಟೀಸನ್ನು ಪ್ರಕಟಿಸುವಂತೆ ಅವರಿಗೆ ಸೂಚನೆಗಳನ್ನು ನೀಡತಕ್ಕದ್ದು. ಚುನಾವಣೆ ನಡೆಯುವ ವಿಷಯವನ್ನು ಸಾರ್ವಜನಿಕರ ಮಾಹಿತಿಗಾಗಿ ದಿನಪತ್ರಿಕೆಗಳಲ್ಲಿ ಹಾಗೂ ಸ್ಥಳೀಯ ಪತ್ರಿಕೆಗಳಲ್ಲಿ (ವೆಚ್ಚ ಬಾರದಂತೆ) ಪ್ರಕಟಿಸಲು ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.

ಸದಾಚಾರ ಸಂಹಿತೆಯು ದಿನಾಂಕ: 26–10–2016 ರಿಂದ ಜಾರಿಗೆ ಬಂದಿದ್ದು, ಚುನಾವಣಾ ಪ್ರಕ್ರಿಯೆಯು ಮುಕ್ತಾಯಗೊಳ್ಳುವವರೆಗೆ ಅಂದರೆ ದಿನಾಂಕ:23–11–2016 ರವರೆಗೆ ಚುನಾವಣೆ ನಡೆಯುವ ನಗರ ಸ್ಥಳೀಯ ಸಂಸ್ಥೆಗಳ ವಾರ್ಡು ವ್ಯಾಪ್ತಿಯಲ್ಲಿ ಮಾತ್ರ ಜಾರಿಯಲ್ಲಿರುತ್ತದೆ. ಸದಾಚಾರ ಸಂಹಿತೆಯು ಯಾವುದೇ ರೀತಿಯಲ್ಲೂ ಉಲ್ಲಂಘನೆಯಾಗದಂತೆ ಜಿಲ್ಲಾ ಚುನಾವಣಾಧಿಕಾರಿಯವರು ಕ್ರಮವಹಿಸತಕ್ಕದ್ದು.

ಆದೇಶಾನುಸಾರ

**ನಾಗರಾಜು ಎನ್.ಆರ್.**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ
ಕರ್ನಾಟಕ, ಬೆಂಗಳೂರು

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 25

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**

| ಭಾಗ-***III*** | ಬೆಂಗಳೂರು, ಗುರುವಾರ, ಅಕ್ಟೋಬರ್ ೨೭, ೨೦೧೬ (ಕಾರ್ತೀಕ ೫, ಶಕ ವರ್ಷ ೧೯೩೮) | ನಂ. ೧೨೦೦ |
|---|---|---|
| ***Part–III*** | ***Bengaluru, Thursday, October 27, 2016 (Karthika 5, Shaka Varsha 1938)*** | ***No. 1200*** |


**URBAN DEVELOPMENT SECRETARIAT**

**NOTIFICATION**

**No. UDD 99 KMR 2016, Bengaluru, Dated: 27th October 2016**

As per the order of Hon'ble High Court of Karnataka dated: 29.08.2016 in W.P. No. 41101/2016 (LB-ELE), in partial modification of the Notification No. UDD 25 MLR 2016(2) dated: 24.02.2016 and UDD 25 MLR 2016(2) dated: 04.03.2016, Government hereby allot's the offices of the President and Vice President in respect of the BAGEPALLI TOWN MUNICIPAL COUNCIL, for the EIGHTH TERM as detailed below.

| Sl. No. | Name of the Town Municipal Council | President | Vice President |
|---|---|---|---|
| 1. | Bagepalli | G(W)<br>(As in Notification No. UDD 25 MLR 2016(2) dated: 04.03.2016 | SC(W) |

By order and in the name of the Governor of Karnataka

**Siddiq Pasha**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 25

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ–III<br>Part–III | ಬೆಂಗಳೂರು, ಗುರುವಾರ, ಅಕ್ಟೋಬರ್ ೨೭, ೨೦೧೬ (ಕಾರ್ತೀಕ ೫, ಶಕ ವರ್ಷ ೧೯೩೮)<br>*Bengaluru, Thursday, October 27, 2016 (Karthika 5, Shaka Varsha 1938)* | ನಂ. ೧೨೦೩<br>*No. 1203* |
|---|---|---|

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಆ–1:2:ಮುಪು–ಪಜೇಪ:2016, ಬೆಂಗಳೂರು–560 001, ದಿನಾಂಕ: 27.10.2016.**

**ವಿಷಯ:** ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ವಿವಿಧ ವೃಂದಗಳಲ್ಲಿನ ಮುಂಬಡ್ತಿಯಲ್ಲಿ ಅನುಸರಿಸಿರುವ ಮೀಸಲಾತಿಯನ್ನು ಪುನರಾವಲೋಕಿಸಿ ಪರಿಷ್ಕೃತ ಜೇಷ್ಠತಾ ಪಟ್ಟಿಗಳಿಗೆ ಆಕ್ಷೇಪಣೆ/ಸಲಹೆಗಳನ್ನು ನೀಡಲು ಕಾಲಾವಧಿಯನ್ನು ವಿಸ್ತರಿಸುವ ಬಗ್ಗೆ

**ಉಲ್ಲೇಖ:** ಅಧಿಸೂಚನೆ ಸಂ: ಕವಿಪ:ಆ–1:2:ಮುಪು–ಪಜೇಪ:2016, ದಿ:19.10.2016.

ದಿನಾಂಕ:19.10.2016ರಂದು ಹೊರಡಿಸಲಾಗಿದ್ದ ಅಧಿಸೂಚನೆಯಲ್ಲಿ ಈ ಸಚಿವಾಲಯದ ವಿವಿಧ ವೃಂದಗಳಲ್ಲಿ ಮುಂಬಡ್ತಿಯಲ್ಲಿ ಮೀಸಲಾತಿಯನ್ನು ಅನುಸರಿಸಲಾಗಿರುವ ಮೀಸಲಾತಿ ಪುನರಾವಲೋಕನ ಪರಿಷ್ಕೃತ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಬಾಧಿತರಾಗುವ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದ ಅಧಿಕಾರಿ/ನೌಕರರುಗಳಿಗೆ ಆಕ್ಷೇಪಣೆ/ಸಲಹೆಗಳನ್ನು ಸಲ್ಲಿಸಲು **ನಿಗದಿಪಡಿಸಲಾಗಿದ್ದ ಕಾಲಾವಧಿಯನ್ನು, ದಿನಾಂಕ:18.11.2016ರ ಸಾಯಂಕಾಲ 04.00 ಗಂಟೆಯವರೆಗೆ ವಿಸ್ತರಿಸಲಾಗಿದೆಯೆಂದು ಈ ಮೂಲಕ ತಿಳಿಯಪಡಿಸಿದೆ.** ನಿಗಧಿತ ಕಾಲಾವಧಿ ಮೀರಿ ಸ್ವೀಕರಿಸಲಾಗುವ ಆಕ್ಷೇಪಣೆ/ಸಲಹೆಗಳನ್ನು ಪರಿಗಣಿಸಲಾಗುವುದಿಲ್ಲ.

ಮಾನ್ಯ ಸಭಾಪತಿಯವರ ಆದೇಶಾನುಸಾರ,

**ಶ್ರೀನಿವಾಸ**

ಕಾರ್ಯದರ್ಶಿ

ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಏ7) ಪ್ರತಿಗಳು: 350

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ-III | ಬೆಂಗಳೂರು, ಶುಕ್ರವಾರ, ಅಕ್ಟೋಬರ್ ೨೮, ೨೦೧೬ (ಕಾರ್ತೀಕ ೬, ಶಕ ವರ್ಷ ೧೯೩೮) | ನಂ. ೧೨೦೫ |
|---|---|---|
| Part-III | Bengaluru, Friday, October 28, 2016 (Karthika 6, Shaka Varsha 1938) | No. 1205 |



ಆಯುಕ್ತರ ಕಾರ್ಯಾಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

ಅಧಿಸೂಚನೆ

ಸಂಖ್ಯೆ : ಜಂ.ಆ(ದ)ಜಿ.ಚು(ದ)ಸಿ2/ಪಿಆರ್-20/16-17, ದಿನಾಂಕ : 28-10-2016

ಕರ್ನಾಟಕ ನಗರ ಪಾಲಿಕೆ (ಚುನಾವಣೆ) ನಿಯಮಗಳು 1979ರ ನಿಯಮ 4ರ ಮೇರೆಗೆ ಆಯುಕ್ತರಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಆಯುಕ್ತರಾದ ಎನ್.ಮಂಜುನಾಥ ಪ್ರಸಾದ್ ಭಾ.ಆ.ಸೇ. ಆದ ನಾನು ನಂ.172-ಬಿ.ಟಿ.ಎಂ. ಲೇ ಔಟ್ ವಿಧಾನಸಭಾ ವ್ಯಾಪ್ತಿಯಲ್ಲಿ ಬರುವ ವಾರ್ಡ್ ನಂ. 146ಕ್ಕೆ ಈ ಕೆಳಕಂಡ ಅಧಿಕಾರಿಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಚುನಾವಣೆ ಜರುಗಿಸುವ ಕುರಿತು ರಾಜ್ಯ ಚುನಾವಣಾ ಆಯೋಗ ನಿಗಧಿಪಡಿಸುವ ಕಾರ್ಯಕ್ರಮದಂತೆ ಚುನಾವಣೆ ನಡೆಸಲು ಕ್ರಮವಾಗಿ ಚುನಾವಣಾಧಿಕಾರಿ ಹಾಗೂ ಸಹಾಯಕ ಚುನಾವಣಾಧಿಕಾರಿಯಾಗಿ ನೇಮಿಸಿರುತ್ತೇನೆ.

| ಕ್ರಮ ಸಂಖ್ಯೆ | ನಗರ ಪಾಲಿಕೆ ಹೆಸರು | ಚುನಾವಣಾಧಿಕಾರಿಗಳ ಪದನಾಮ | ಸಹಾಯಕ ಚುನಾವಣಾಧಿಕಾರಿಗಳ ಪದನಾಮ | ವ್ಯಾಪ್ತಿಗೆ ಒಳಪಡುವ ವಾರ್ಡ್‌ಗಳ ಸಂಖ್ಯೆ ಮತ್ತು ಹೆಸರು |
|---|---|---|---|---|
| 1. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | ಸಹಾಯಕ ಆಯುಕ್ತರು(ಆಸ್ತಿಗಳು) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕೇಂದ್ರ ಕಛೇರಿ, ಎನ್.ಆರ್.ಚೌಕ, ಬೆಂಗಳೂರು – 560 002. | ತಹಶೀಲ್ದಾರ್ ಗ್ರೇಡ್ – II ಬಿ.ಎಂ.ಆರ್.ಡಿ.ಎ. ಬೆಂಗಳೂರು. | ನಂ. 146-ಲಕ್ಕಸಂದ್ರ |

ಆಯುಕ್ತರು
ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 100

***RNI No. KARBIL/2001/47147***

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ–*IVA* | ಬೆಂಗಳೂರು, ಭಾನುವಾರ, ಅಕ್ಟೋಬರ್ ೨, ೨೦೧೬ (ಆಶ್ವಯುಜ ೧೦, ಶಕ ವರ್ಷ ೧೯೩೮) | ನಂ. ೧೧೪೭ |
|---|---|---|
| ***Part–IVA*** | ***Bengaluru, Sunday, October 2, 2016 (Aashwayuja 10, Shaka Varsha 1938)*** | ***No. 1147*** |


**ಕರ್ನಾಟಕ ವಿಧಾನಸಭೆಯ ಸಚಿವಾಲಯ**

ಅಧಿಸೂಚನೆ

**ಸಂಖ್ಯೆ: ವಿಸಸ/ಶಾರಶಾ/880/ವಿಸಅಕ/2016, ಬೆಂಗಳೂರು, ದಿನಾಂಕ: 02.10.2.016**

14ನೇ ವಿಧಾನಸಭೆಯ 11ನೇ ಅಧಿವೇಶನದ ಮುಂದುವರೆದ ಉಪವೇಶನವು **ಸೋಮವಾರ, ದಿನಾಂಕ: 03ನೇ ಅಕ್ಟೋಬರ್, 2016 ರಂದು ಬೆಳಗ್ಗೆ 11.00 ಗಂಟೆಗೆ ಬೆಂಗಳೂರಿನ ವಿಧಾನ ಸೌಧದಲ್ಲಿರುವ ವಿಧಾನ ಸಭೆಯ ಸಭಾಂಗಣದಲ್ಲಿ** ಸೇರಲಿದೆ.

ಆದುದರಿಂದ, ಸದರಿ ಸಭೆಗೆ ತಾವು ಹಾಜರಾಗಬೇಕೆಂದು ಕೋರುತ್ತೇನೆ.

ತಮ್ಮ ವಿಶ್ವಾಸಿ

**ಎಸ್. ಮೂರ್ತಿ**
ಕಾರ್ಯದರ್ಶಿ (I/c)
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLAS/880/LEGN/2016, Bengaluru, Dated: 02.10.2016**

The adjourned meeting of the 11th Session of the 14th Assembly is convened to meet on Monday, the 3rd October, 2016 **at 11.00 a.m. in the "Legislative Assembly Chamber", Vidhana Soudha, Bengaluru.**

I request you to kindly attend the meeting.

Yours faithfully

**S. MURTHY**
Secretary (I/c)
Karnataka Legislative Assembly

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 50

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| ಭಾಗ–IVA | ಬೆಂಗಳೂರು, ಸೋಮವಾರ, ಅಕ್ಟೋಬರ್ ೩, ೨೦೧೬ (ಆಶ್ವಯುಜ ೧೧, ಶಕ ವರ್ಷ ೧೯೩೮) | ನಂ. ೧೧೪೯ |
|---|---|---|
| Part–IVA | Bengaluru, Monday, October 3, 2016 (Aashwayuja 11, Shaka Varsha 1938) | No. 1149 |


**REVENUE SECRETARIAT**
**NOTIFICATION**
**No. RD 68 LGP 2015, Bengaluru, Dated: 03-10-2016**

The draft of the following rules further to amend the Karnataka Land Revenue Rules, 1966 was published as required by sub-section (1) of section 197 of the Karnataka Land Revenue Act, 1964 (Karnataka Act 12 of 1964) in Notification No. RD 68 LGP 2015, dated: 16-09-2016, published in Part IV-A of the Karnataka Gazette dated:16-09-2016 inviting objections and suggestions from all the persons likely to be affected thereby within fifteen days from the date of its publication in the Official Gazette.

Whereas the said Gazette was made available to the public on 16-09-2016.

And whereas no objections and suggestions have been received by the State Government within the period specified above.

Now, therefore, in exercise of the powers conferred by sub-section (1) of section 197 of the Karnataka Land Revenue Act, 1964 (Karnataka Act 12 of 1964) the Government of Karnataka hereby makes the following rules to amend the Karnataka Land Revenue Rules, 1966, namely:-

**RULES**

**1. Title and Commencement.-**(1) These rules may be called the Karnataka Land Revenue (Seventh Amendment) Rules, 2016.

(2) They shall come into force from the date of their final publication in the Official Gazette.

**2. Amendment of rule 108-X.-** In the Karnataka Land Revenue Rules, 1966, in rule 108-X, in sub rule (1), for the words, brackets and figures **“**within one year from the date of commencement of the Karnataka Land Revenue (Amendment) Rules, 2015” the words, brackets and figures **“within fifteen months from the date of commencement of the Karnataka Land Revenue (Amendment) Rules, 2015”** shall be substituted.

By Order and in the name of the Governor of Karnataka

**S.L.MAHANTHE GOWDA**
Under Secretary to Government,
Revenue Department (Land Grants-1).

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 100

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ–IVA | ಬೆಂಗಳೂರು, ಸೋಮವಾರ, ಅಕ್ಟೋಬರ್ ೩, ೨೦೧೬ (ಆಶ್ವಯುಜ ೧೧, ಶಕ ವರ್ಷ ೧೯೩೮) | ನಂ. ೧೧೫೦ |
|---|---|---|
| Part–IVA | Bengaluru, Monday, October 3, 2016 (Aashwayuja 11, Shaka Varsha 1938) | No. 1150 |



**ಕರ್ನಾಟಕ ವಿಧಾನಸಭೆಯ ಸಚಿವಾಲಯ**

ಅಧಿಸೂಚನೆ

**ಸಂಖ್ಯೆ: ಕವಿಸಸ/880/ಶಾರಶಾ/2016, ಬೆಂಗಳೂರು, ದಿನಾಂಕ: 03.10.2016**

ಸೋಮವಾರ, ದಿನಾಂಕ 03ನೇ ಅಕ್ಟೋಬರ್, 2016 ರಂದು ಪ್ರಾರಂಭವಾದ 14ನೇ ವಿಧಾನಸಭೆಯ 11ನೇ ಅಧಿವೇಶನದ ಮುಂದುವರೆದ ಉಪವೇಶನವನ್ನು ಅದೇ ದಿನದಂದು ಅನಿರ್ಧಿಷ್ಟ ಕಾಲದವರೆಗೆ ಮುಂದೂಡಲಾಯಿತು.

**ಎಸ್. ಮೂರ್ತಿ**
ಕಾರ್ಯದರ್ಶಿ (I/c)
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY SECRETARIAT**
**NOTIFICATION**
**No. KLAS/880/LGA/2016, Bengaluru, Dated: 03.10.2016**

The adjourned meeting of the 11th Session of the 14th Legislative Assembly, which commenced on Monday, the 3rd October, 2016 is adjourned sine-die on the same day.

**S. MURTHY**
Secretary (I/c)
Karnataka Legislative Assembly

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 50

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ–IVA | ಬೆಂಗಳೂರು, ಮಂಗಳವಾರ, ಅಕ್ಟೋಬರ್ ೪, ೨೦೧೬ (ಆಶ್ವಯುಜ ೧೨, ಶಕ ವರ್ಷ ೧೯೩೮) | ನಂ. ೧೧೫೧ |
|---|---|---|
| Part–IVA | Bengaluru, Tuesday, October 4, 2016 (Aashwayuja 12, Shaka Varsha 1938) | No. 1151 |



**ಕರ್ನಾಟಕ ವಿಧಾನ ಪರಿಷತ್ ಸಚಿವಾಲಯ**

ಅಧಿಸೂಚನೆ

**ಸಂಖ್ಯೆ: ಕವಿಪ/ಶಾರಶಾ/135/131ನೇಮುಅ/2016, ಬೆಂಗಳೂರು, ದಿನಾಂಕ: 03.10.2.016**

**03ನೇ ಅಕ್ಟೋಬರ್, 2016ರ** ಸೋಮವಾರದಂದು ನಡೆದ ಕರ್ನಾಟಕ ವಿಧಾನ ಪರಿಷತ್ತಿನ ನೂರ ಮೂವತ್ತೊಂದನೆಯ ಅಧಿವೇಶನದ ತುರ್ತು ಉಪವೇಶನವನ್ನು ಅದೇ ದಿನ ಸಾಯಂಕಾಲ: 07.20 ಗಂಟೆಗೆ ಅನಿರ್ಧಿಷ್ಟ ಕಾಲದವರೆಗೆ ಮುಂದೂಡಲಾಯಿತು.

**ಶ್ರೀನಿವಾಸ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**KARNATAKA LEGISLATIVE COUNCIL SECRETARIAT**
**NOTIFICATION**
**No. KLC/LGC/135/131st AS/2016, Bengaluru, Dated: 03.10.2016**

The emergent meeting of the Hundred and Thirty First continued Session of Karnataka Legislative Council held on Monday, the **03rd October, 2016** stands adjourned sine-die on the same day in the evening at 7.20 p.m.

**SRINIVASA**
Secretary
Karnataka Legislative Council

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 50

***RNI No. KARBIL/2001/47147***

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ-***IVA*** | ಬೆಂಗಳೂರು, ಬುಧವಾರ, ಅಕ್ಟೋಬರ್ ೫, ೨೦೧೬ (ಆಶ್ವಯುಜ ೧೩, ಶಕ ವರ್ಷ ೧೯೩೮) | ನಂ. ೧೧೫೩ |
| ***Part–IVA*** | ***Bengaluru, Wednesday, October 5, 2016 (Aashwayuja 13, Shaka Varsha 1938)*** | ***No. 1153*** |


**EDUCATION SECRETARIAT**
**NOTIFICATION-I**
**No. ED 317 PGC 2012, Bengaluru, Dated: 05.10.2016**

The draft of the following rules further to amend the Karnataka Educational Institutions (Regulation of certain fees and Donations) Rules, 1999 which the Government of Karnataka proposes to make in exercise of the powers conferred by sub-section (1) of section 145 read with section 48 of the Karnataka Education Act, 1983 (Karnataka Act 1 of 1995) is hereby published as required by sub-section (1) of section 145 of the said Act, for the information of all persons likely to be affected thereby and notice is hereby given that the said draft will be taken into consideration after thirty days from the date of its publication in the Official Gazette.

The objectives of the proposed draft rules is to enhance transparency, openness and accountability in the manner of collection of notified fees for admission of students to unaided institutions, and to factor in the cost differential in different geographical locations and the fee reimbursed by the government for the students admitted under sub-section (1)(c) of section 12 of Right to Education Act.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections or suggestions may be addressed to the Principal Secretary to Government, Education Department (Primary and Secondary Education) M.S. Building, Dr.B.R. Ambedkar Veedhi, Bangalore-560001.

**DRAFT RULES**

**1. Title and commencement.-** (1) These rules may be called the Karnataka Educational Institutions (Regulation of certain Fees and Donation) (Amendment) Rules, 2016.

(2) They shall come into force from the date publication in the Official Gazette.

**2**. **Amendment of rule 4**.- In the Karnataka Educational Institutions (Regulation of certain fees and Donations) Rules, 1999 (hereinafter referred to as the said rules) for rule 4 the following shall be substituted, namely:-

"**4. Fee in unaided private educational institutions.-** (1) Every private unaided educational institution shall disclose within 31st December of every calendar year its fee structure for the ensuing academic year starting in the next calendar year, the audit report of its finances in the previous financial year ended on 31st March, details of teaching resources, result in the public examination and a statement showing computation and compliance of the fee structure as per the rules on the website of Primary and Secondary Education Department in the manner specified through a notification.

(2) A private unaided educational institution shall be allowed to collect fees not exceeding the fee structure disclosed by the institution in the manner specified under sub-rule (1).

Provided that no fee shall be collected from the students admitted under item (c) of sub-section (1) of section 12 of the Right of Children to Free and Compulsory Education Act, 2009 (Central Act No. 35 of 2009).

(3) Notwithstanding anything contained in any rules made in this behalf the tuition fee to be charged by a private unaided educational Institution under rule 10(3)(b)(ii) of the Karnataka Educational Institutions (Classification, Regulation and Prescription of curricula etc.,) Rules, 1995 in the ensuing academic year shall not exceed the value determined in the following manner, namely:-

(i) The normative total expenditure for the ensuing academic year shall be computed based on the actual salary expenditure incurred on teaching and non-teaching staff, including outsourced staff, in the previous financial year ended on 31st March plus an additional amount towards contingency, operation and maintenance costs, rent, debt servicing, depreciation, etc. and the likely cost increase during the period between the previous financial year and the ensuing academic year.

Explanation: For the purpose of this sub-rule, the salary expenditure shall include,-

(a) Contribution towards Provident Fund, ESI, Pension Fund and National Pension System made by the management; and

(b) Encashment benefit, LTC/HTC benefits, medical allowance, conveyance allowance and other such allowance, if any, given to the staff of the institution.

(ii) The additional amount shall not be more than the value arrived on applying such percentage on the actual salary expenditure in the previous financial year ended on 31st March referred in clause (i) above as specified in column (3) of the Table below, based on geographical location of the institution specified in column (2) thereof.

**Table**

| **Sl.No.** | **Geographical Location of Institution and Areas** | **Percentage of Actual Salary Expenditure** |
|---|---|---|
| (1) | (2) | (3) |
| 1. | Grama Panchayat/Town Panchayat/ Town Municipal Council | Fifty Percent |
| 2. | City Municipal Council | Sixty Percent |
| 3. | Municipal Corporation other then BBMP | Seventy five Percent |
| 4. | Bengaluru Bruhat Mahanagara Palike | One hundred Percent |

(iii) The normative net expenditure (NNE) for the ensuing academic year shall be computed based on the normative total expenditure (NTE) under sub-rule (3)(i) and (3)(ii) minus the total of:-

(a) the reimbursement received or due from the Government for the students admitted under clause (c) of sub-section (1) of section 12 of the Right of children to Free and Compulsory Education Act, 2009 (Central Act 35 of 2009) for the previous financial year ended on 31st March;

(b) the fee for certificates collected under sub-rule (1) of rule 6 of said rules during the previous financial year ended on 31st March;

(c) any money received under sub-rule (3) of rule 6 of the said rules during the previous financial year ended on 31st March for the purpose of supporting recurring expenditure on teaching activities;

(d) the term fee collected under sub-rule (3)(a)(ii) of rule 10 of the Karnataka Educational Institutions (Classification, Regulation and Prescription of curricula etc.,) Rules, 1995 during the previous financial year ended on 31st March; and

